# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮಾರ್ಚ್ ೨೪, ೨೦೧೬ (ಚೈತ್ರ ೪, ಶಕ ವರ್ಷ ೧೯೩೭)<br>Bengaluru, Thursday, March 24, 2016 (Chaithra 4, Shaka Varsha 1937) | ಸಂಚಿಕೆ ೧೨<br>Issue 12 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ:** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಬಳಕೆಯಾಗದ ಅನುದಾನವನ್ನು ಹಲವಾರು ಬ್ಯಾಂಕ್‌ಗಳಲ್ಲಿ ಠೇವಣಿ ಹೂಡಿರುವ ಬಗ್ಗೆ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಅಧಿಕಾರಿ ತಂಡಕ್ಕೆ ಹೆಚ್ಚುವರಿ ಅಧಿಕಾರಿಗಳನ್ನು ಸೇರ್ಪಡೆ ಮಾಡುವ ಹಾಗೂ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆಇ 288 ರಾಲೆಪ 2015, ದಿ:1.10.2015.
2. ಅಪರ ನಿರ್ದೇಶಕರು, ಬೆಂಗಳೂರು ಪ್ರಾದೇಶಿಕ ಕಚೇರಿ, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ ಇವರ ಪತ್ರ ದಿನಾಂಕ:BRO/RWS/1/2015-16/76 ದಿನಾಂಕ:23.11.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:1.10.2015ರ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಹಾಗೂ ಕರ್ನಾಟಕ ಗ್ರಾಮೀಣ ಮೂಲ ಸೌಲಭ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಗಳಲ್ಲಿ ಬಳಕೆಯಾಗದ ಅನುದಾನವನ್ನು ವೆಚ್ಚ ಭರಿಸದೇ ಹಲವಾರು ಬ್ಯಾಂಕ್‌ಗಳಲ್ಲಿಟ್ಟ ಕುರಿತು ವಿವರವಾದ ತನಿಖೆ, ಲೆಕ್ಕಪರಿಶೋಧನೆ ಕೈಗೊಳ್ಳುವ ಸಲುವಾಗಿ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಮೂವರು ಅಧಿಕಾರಿಗಳ ತಂಡವನ್ನು ರಚಿಸಲಾಗಿತ್ತು.

ಅಪರ ನಿರ್ದೇಶಕರು, ಬೆಂಗಳೂರು ಪ್ರಾದೇಶಿಕ ಕಚೇರಿ, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯ ನೀರು ಮತ್ತು ನೈರ್ಮಲ್ಯ ಸಂಸ್ಥೆಯು ಯೋಜನೆಯ ಒಂದು ಘಟಕಕ್ಕೆ ಸಂಬಂಧಪಟ್ಟಂತೆ ಮಾತ್ರ ಬಾಗಲಕೋಟೆ ವಿಭಾಗದಿಂದ ನೀಡಲ್ಪಟ್ಟ Payment advises ಗಳನ್ನು ಬ್ಯಾಂಕ್‌ನಿಂದ ಪಡೆದಿದೆ. ಉಳಿದ 33 ವಿಭಾಗಗಳ 7 ಘಟಕಗಳು ಹಾಗೂ ಬಾಗಲಕೋಟೆ ವಿಭಾಗದ ಇನ್ನು 6 ಘಟಕಗಳ ವಿವರವನ್ನು ಸಂಸ್ಥೆಯು ಪಡೆದು, ವೆಚ್ಚ ಕುರಿತು ತ:ಖ್ತೆಯನ್ನು ಸಿದ್ಧಪಡಿಸಿ ಅದನ್ನು ಬ್ಯಾಂಕ್ ತ:ಖ್ತೆಗಳೊಡನೆ ಲೆಕ್ಕ ಸಮನ್ವಯಗೊಳಿಸಬೇಕಾಗಿದೆ. ಈ ಲೆಕ್ಕ ಸಮನ್ವಯ ಕಾರ್ಯ ಮುಗಿದ ನಂತರ ವೆಚ್ಚ ಕುರಿತ ಲೆಕ್ಕಪರಿಶೋಧನೆಯನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ ಎಂದು ತಿಳಿಸಿ, ಅವರಿಗೆ ದಿನಾಂಕ:1.4.2009 ರಿಂದ 31.3.2015ರವರೆಗಿನ ವೆಚ್ಚ ಕುರಿತ ಲೆಕ್ಕ ಸಮನ್ವಯ ಪೂರ್ಣಗೊಳಿಸಲು ರಾಜ್ಯ ನೀರು ಮತ್ತು ನೈರ್ಮಲ್ಯ ಸಂಸ್ಥೆಗೆ ಹೆಚ್ಚಿನ ಸಮಯಾವಕಾಶ ಬೇಕಾಗಿರುವ ಕಾರಣ ಲೆಕ್ಕಪರಿಶೋಧನಾ ಕಾರ್ಯವನ್ನು ಕೈಗೊಳ್ಳಲು ಲೆಕ್ಕಪರಿಶೋಧನಾ ತಂಡಕ್ಕೆ ಮೂರು ತಿಂಗಳ ಕಾಲಾವಕಾಶ ಹಾಗೂ ಈ ಕಾರ್ಯಕ್ಕೆ ಹಿರಿಯ ಅನುಭವಿ ಅಧಿಕಾರಿಗಳ ಸೇವೆಯನ್ನು ಹೆಚ್ಚುವರಿಯಾಗಿ ಒದಗಿಸಿ ಲೆಕ್ಕಪರಿಶೋಧನಾ ತಂಡದಲ್ಲಿ ಸೇರ್ಪಡೆ ಮಾಡಲು ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 288 ರಾಲೆಪ 2015, ಬೆಂಗಳೂರು, ದಿನಾಂಕ:14.12.2015.**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಹಾಗೂ ಕರ್ನಾಟಕ ಗ್ರಾಮೀಣ ಮೂಲ ಸೌಲಭ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಗಳಲ್ಲಿ ಬಳಕೆಯಾಗದ ಅನುದಾನವನ್ನು ವೆಚ್ಚ ಭರಿಸದೇ ಹಲವಾರು ಬ್ಯಾಂಕ್‌ಗಳಲ್ಲಿಟ್ಟ ಕುರಿತು ವಿವರವಾದ ತನಿಖೆ, ಲೆಕ್ಕಪರಿಶೋಧನೆ ಕೈಗೊಳ್ಳುವ ಸಲುವಾಗಿ ರಚಿಸಲಾಗಿದ್ದ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಅಧಿಕಾರಿಗಳ ತಂಡಕ್ಕೆ ಹೆಚ್ಚುವರಿಯಾಗಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಿಸಲಾಗಿದೆ.

1. ಶ್ರೀಮತಿ ಸುನೀತಾ ಎಂ. ಹಿರಿಯ ಉಪ ನಿರ್ದೇಶಕರು, ಪ್ರಧಾನ ನಿರ್ದೇಶಕರ ಕಚೇರಿ, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ, ಬೆಂಗಳೂರು.
2. ಶ್ರೀಮತಿ ಅರ್ಚನಾ ಕಮಲನಾಭನ್, ಹಿರಿಯ ಉಪ ನಿರ್ದೇಶಕರು, ಪ್ರಧಾನ ನಿರ್ದೇಶಕರು ಕಚೇರಿ, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ, ಬೆಂಗಳೂರು.

ಲೆಕ್ಕಪರಿಶೋಧನಾ ಕಾರ್ಯವನ್ನು ಕೈಗೊಂಡು ವರದಿಯನ್ನು ಸಲ್ಲಿಸಲು ಲೆಕ್ಕಪರಿಶೋಧನಾ ತಂಡಕ್ಕೆ ಹೆಚ್ಚುವರಿಯಾಗಿ ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR. 50**

## ಆರ್ಥಿಕ ಸಚಿವಾಲಯ

**ವಿಷಯ:** ಪ್ರತಿ ವರ್ಷ ನಡೆಯುವ ಎಸ್.ಎಸ್.ಎಲ್.ಸಿ, ಪಿ.ಯು.ಸಿ, ಕೇಂದ್ರ ಲೋಕ ಸೇವಾ ಆಯೋಗ ಹಾಗೂ ವಿವಿಧ ಇಲಾಖಾ ಪರೀಕ್ಷೆಗಳು ಇತ್ಯಾದಿ ಹಲವಾರು ಪರೀಕ್ಷೆಗಳ ಪ್ರಶ್ನೆ ಪತ್ರಿಕೆಗಳನ್ನು ಮುಂಚಿತವಾಗಿ ವಿತರಿಸುವ ಬಗ್ಗೆ–ಪರಿಷ್ಕೃತ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆಇ 194 ಆಖಇ 2015 ಬೆಂಗಳೂರು, ದಿನಾಂಕ:13.11.2015.
2. ಖಜಾನೆ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಖನಿ/ಪ್ರಕ್ರಿಯೆ/01/15–16, ದಿ:26.11.2015.

**ಪ್ರಸ್ತಾವನೆ:**

ಖಜಾನೆ ನಿರ್ದೇಶಕರು, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪ್ರತಿ ವರ್ಷ ನಡೆಯುವ ಎಸ್.ಎಸ್.ಎಲ್.ಸಿ, ಪಿ.ಯು.ಸಿ, ಕೇಂದ್ರ ಲೋಕ ಸೇವಾ ಆಯೋಗ ಹಾಗೂ ವಿವಿಧ ಇಲಾಖಾ ಪರೀಕ್ಷೆಗಳು ಇತ್ಯಾದಿ ಹಲವಾರು ಪರೀಕ್ಷೆಗಳ ಪ್ರಶ್ನೆ ಪತ್ರಿಕೆಗಳನ್ನು ಖಜಾನೆಯಲ್ಲಿ ಇಡಲಾಗುತ್ತಿದೆ. ಒಂದು ಗಂಟೆ ಮುಂಚಿತವಾಗಿ ವಿತರಿಸುವ ಬಗ್ಗೆ ದಿನಾಂಕ 03.10.2015ರ ಪತ್ರದಲ್ಲಿ ಕರ್ನಾಟಕ ಖಜಾನೆ ಸಂಹಿತೆ 18(ಎ)ರಡಿಯ ಅಪವಾದದ ಸೂಚನೆಯನುಸಾರ ಖಜಾನೆಗಳಿಂದ ಒಂದು ಗಂಟೆ ಮುಂಚಿತವಾಗಿ ಪ್ರಶ್ನೆ ಪತ್ರಿಕೆ ಹಾಗೂ ಓ.ಎಂ.ಆರ್ ಶೀಟ್ಸ್ ವಿತರಿಸುವ ನಿಯಮವನ್ನು ಸಡಿಲಿಸಿ ಆದೇಶ ನೀಡಲು ಅವಕಾಶವಾಗುವಂತೆ ಖಜಾನೆ ನಿರ್ದೇಶಕರಿಗೆ ಸ್ಥಾಯಿ ಆದೇಶವನ್ನು ನೀಡಲು ಕೋರಲಾಗಿ, ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 13.11.2015ರ ಸರ್ಕಾರದ ಆದೇಶದಲ್ಲಿ ಪ್ರತಿ ವರ್ಷ ನಡೆಸಲಾಗುವ ಎಸ್.ಎಸ್.ಎಲ್.ಸಿ, ಪಿ.ಯು.ಸಿ, ಕೇಂದ್ರ ಲೋಕ ಸೇವಾ ಆಯೋಗ, ವಿವಿಧ ಇಲಾಖೆಗಳ ಇಲಾಖಾ ಪರೀಕ್ಷೆಗಳು ಇತ್ಯಾದಿ ಹಲವಾರು ಪರೀಕ್ಷೆಗಳ ಸಂಬಂಧ ಖಜಾನೆಯಲ್ಲಿ ಇಡಲಾಗುವ ಪ್ರಶ್ನೆ ಪತ್ರಿಕೆಗಳು ಹಾಗೂ ಓ.ಎಂ.ಆರ್ ಶೀಟ್ಸ್ ಇತ್ಯಾದಿಗಳನ್ನು ಪರೀಕ್ಷಾ ಪ್ರಾಧಿಕಾರಿಗಳ ಮೇರೆಗೆ ಪರಿಶೀಲಿಸಿ ವಿವೇಚನಾನುಸಾರ ಖಜಾನಾಧಿಕಾರಿಗಳಿಗೆ ತಕ್ಷಣ ಸೂಚನೆಗಳನ್ನು ನೀಡಲು ಸಹಾಯವಾಗುವಂತೆ ಕರ್ನಾಟಕ ಖಜಾನೆ ಸಂಹಿತೆ ಅನುಚ್ಛೇದ 18(ಎ)ರಡಿ ಅಪವಾದದ ಸೂಚನೆ ಅನುಸಾರ ಖಜಾನೆಗಳಿಂದ ಒಂದು ಗಂಟೆ ಮುಂಚಿತವಾಗಿ ಪ್ರಶ್ನೆ ಪತ್ರಿಕೆ ಹಾಗೂ ಓ.ಎಂ.ಆರ್ ಶೀಟ್ಸ್ ಇತ್ಯಾದಿಗಳನ್ನು ನೀಡುವ ಅಧಿಕಾರವನ್ನು ನಿರ್ದೇಶಕರು, ಖಜಾನೆ ಇಲಾಖೆ ಇವರಿಗೆ ನೀಡಲಾಗಿರುತ್ತದೆ ಎಂದು ಆದೇಶವನ್ನು ನೀಡಲಾಗಿದೆ. ಸದರಿ ಆದೇಶದಲ್ಲಿ ಈಗಿರುವ ನಿಯಮವನ್ನೇ ಪುನರುಚ್ಚಿಸಲಾಗಿದ್ದು, ದಿನಾಂಕ 03.10.2015ರ ಪತ್ರದ ಕೋರಿಕೆಯಂತೆ ಖಜಾನೆ ನಿರ್ದೇಶಕರವರಿಗೆ ಅವಶ್ಯಕತೆಗನ್ವಯ ನಿಯಮ ಸಡಿಲಿಸಿ ಆದೇಶಿಸಲು ಅವಕಾಶವಾಗುವಂತೆ ಸ್ಥಾಯಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 194 ಆಖಇ 2015 ಬೆಂಗಳೂರು, ದಿನಾಂಕ:11.12.2015.**

ಕರ್ನಾಟಕ ಖಜಾನೆ ಸಂಹಿತೆ ಅನುಚ್ಛೇದ 18(ಎ)ರಡಿಯಲ್ಲಿರುವ ಅಪವಾದಕ್ಕೆ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಪ್ರತಿ ವರ್ಷ ನಡೆಸಲಾಗುವ ಎಸ್.ಎಸ್.ಎಲ್.ಸಿ, ಪಿ.ಯು.ಸಿ. ಕೇಂದ್ರ ಲೋಕಸೇವಾ ಆಯೋಗ ವಿವಿಧ ಇಲಾಖೆಗಳ ಇಲಾಖಾ ಪರೀಕ್ಷಾ ಪ್ರಾಧಿಕಾರಿಗಳ ಕೋರಿಕೆಯ ಅನುಸಾರ ಪರೀಕ್ಷೆಗಳು ಇತ್ಯಾದಿ ಹಲವಾರು ಪರೀಕ್ಷೆಗಳ ಸಂಬಂಧ ಪರೀಕ್ಷಾ ಪ್ರಾಧಿಕಾರಿಗಳ ಕೋರಿಕೆಯನ್ನು ಅನುಸರಿಸಿ ಖಜಾನೆಯಲ್ಲಿ ಇಡಲಾಗುವ ಪ್ರಶ್ನೆ ಪತ್ರಿಕೆಗಳು ಹಾಗೂ ಓ.ಎಂ.ಆರ್. ಶೀಟ್ಸ್ ಇತ್ಯಾದಿಗಳನ್ನು ಪರಿಶೀಲಿಸಿ ವಿವೇಚನಾನುಸಾರ ಖಜಾನಾಧಿಕಾರಿಗಳಿಗೆ ತಕ್ಷಣ ಸೂಚನೆಗಳನ್ನು ನೀಡಲು ಸಹಾಯವಾಗುವಂತೆ ಕರ್ನಾಟಕ ಖಜಾನೆ ಸಂಹಿತೆ ಅನುಚ್ಛೇದ 18(ಎ)ರಡಿ ಅಪವಾದದ ಸೂಚನೆಯನುಸಾರ ಖಜಾನೆಯಿಂದ 1 ಗಂಟೆ ಮುಂಚಿತವಾಗಿ ಪ್ರಶ್ನೆ ಪತ್ರಿಕೆಗಳು ಹಾಗೂ ಓ.ಎಂ.ಆರ್ ಶೀಟ್ಸ್ ಇತ್ಯಾದಿಗಳನ್ನು ವಿತರಿಸಬೇಕೆಂಬ ನಿಯಮವನ್ನು ಸಡಿಲಿಸಿ ಖಜಾನೆ ನಿರ್ದೇಶಕರ ಅವಶ್ಯಕತೆಗನುಸಾರ ವಿವೇಚನಾನುಸಾರ ಅವುಗಳನ್ನು ನೀಡಲು ಅವಕಾಶವಾಗುವಂತೆ ಖಜಾನೆ ನಿರ್ದೇಶಕರಿಗೆ ಅಧಿಕಾರವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR. 49**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ರವಿಚಂದು ರಾಥೋಡ್, ದ್ವಿತೀಯ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್ ಇವರ ವಿರುದ್ಧ ಇಲಾಖಾ ವಿಚಾರಣೆ –ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 2010, ದಿನಾಂಕ: 06.03.2013.
2) ವಿಚಾರಣಾಧಿಕಾರಿಯಾಗಿ ನೇಮಕ ಮಾಡಿದ ಕರ್ನಾಟಕ ಉಪಲೋಕಾಯುಕ್ತ ಇವರ ಆದೇಶ ಸಂಖ್ಯೆ:LOK/INQ/14-A/149/2013, ದಿನಾಂಕ: 20.03.2013.
3) ಅಪರ ನಿಬಂಧಕರು, ವಿಚಾರಣೆಗಳು–1, ಅವರ ವಿಚಾರಣಾ ವರದಿ ದಿನಾಂಕ:20.01.2015.
4) ಮಾನ್ಯ ಉಪಲೋಕಾಯುಕ್ತ–1 ರವರ ಶಿಫಾರಸ್ಸು ಮಾಡಿದ ಪತ್ರ ಸಂಖ್ಯೆ: LOK/ARE-1/ENQ-149/2013, ದಿನಾಂಕ: 14.07.2015.
5) ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 29.08.2015.

**ಪ್ರಸ್ತಾವನೆ:**

ಶ್ರೀ ರವಿಚಂದು ರಾಥೋಡ್, ದ್ವಿತೀಯ ದರ್ಜೆ ಸಹಾಯಕ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್ ಇವರು ದಿನಾಂಕ:03.08.2010ರಂದು ಶ್ರೀ ಎಂ.ಮೋಯಿನ್ ಪಾಷ ಬಿನ್ ಜಾನಿ ಮಿಯ್ಯಾ, ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಬೀದರ್, ಇವರ ಕೆ.ಜಿ.ಐ.ಡಿ. ವಿಮಾ ಪಾಲಿಸಿಗಳ ಮೇಲೆ ಸಾಲ ಮಂಜೂರು ಮಾಡಲು ರೂ.500/– ಲಂಚಕ್ಕಾಗಿ ಬೇಡಿಕೆ ಇಟ್ಟು ಸ್ವೀಕರಿಸಿದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 06.03.2013ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ಮೇಲೆ (2)ರಲ್ಲಿ ಓದಲಾದ ದಿನಾಂಕ: 20.03.2013ರ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು, ವಿಚಾರಣೆಗಳು–1 ಅವರ ಮೇಲೆ (3)ರಲ್ಲಿ ಓದಲಾದ ದಿನಾಂಕ:20.01.2015ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

2. ಶಿಸ್ತು ಪ್ರಾಧಿಕಾರದ ಪರ ಸಾಕ್ಷಿ ನೀಡಿದ 1ನೇ ಸಾಕ್ಷಿ ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ತಾನು ಅರ್ಜಿ ಸಲ್ಲಿಸಿದ ರೂ.50,000/–ಗಳ ಸಾಲ ಕುರಿತು ಕೆ.ಜಿ.ಐ.ಡಿ. ಕಛೇರಿಗೆ ಹೋಗಿ ಶ್ರೀ ಪಾಟೀಲ್ ಎಂಬುವವರನ್ನು ಭೇಟಿಯಾದಾಗ ಅವರು ರೂ.500/–ಗಳ ಲಂಚ ಕೇಳಿದರು. ತಾನು ರೂ.350/– ಲಂಚವನ್ನು ಅವರಿಗೆ ನೀಡಿದೆನು. ಆ ಸಮಯದಲ್ಲಿ 2ನೇ ಆರೋಪಿ ಶ್ರೀ ರವಿಚಂದು ರಾಥೋಡ್ ರವರು ಅಲ್ಲಿ ಹಾಜರಿದ್ದರು. ಅದಾದ 2–3 ದಿನಗಳ ನಂತರ ಮತ್ತೇ ಹೋಗಿ ಅದೇ ಪಾಟೀಲ್‌ರನ್ನು ಭೇಟಿ ಮಾಡಿದಾಗ ನನ್ನ ಕೆಲಸವನ್ನು 2ನೇ ಆರೋಪಿಯಾದ ಶ್ರೀ ರವಿಚಂದು ರಾಥೋಡ್ ಅವರು ಮಾಡಬೇಕು ಎಂದ ಮೇರೆಗೆ 2ನೇ ಆರೋಪಿಯನ್ನು ಕೇಳಲಾಗಿ ಅವರು ರೂ.500/– ಲಂಚ ಕೇಳಿದರು. ನಂತರ ನನ್ನ ಸ್ನೇಹಿತರ ಜೊತೆ ಜಿಲ್ಲಾ ಲೋಕಾಯುಕ್ತ ಠಾಣೆಗೆ ಹೋಗಿ ದೂರನ್ನು ದಾಖಲಿಸಿದೆ. ಲೋಕಾಯುಕ್ತ ಪೋಲೀಸರು ನಾನು ನೀಡಿದ 500/–ರೂ.ಗಳ ನೋಟುಗಳಿಗೆ ಫಿನೊಲೋಪ್ತಲಿನ್ (phenolphthalein) ಪೌಡರ್ ಸಿಂಪಡಿಸಿ, ಆರೋಪಿತರು ಕೇಳಿದಾಗ ಮಾತ್ರ ಕೊಡುವಂತೆ ಹಾಗೂ ಆ ನಂತರ ಹೊರಗೆ ಬಂದು ಸಂಜ್ಞೆ ಮಾಡುವಂತೆ ಸೂಚನೆ ನೀಡಿದರು. ಅದರಂತೆ ಲೋಕಾಯುಕ್ತ ಪೋಲೀಸರು 2ನೇ ಆರೋಪಿಯ ಕಛೇರಿಗೆ ಹೋಗಿ ಆತನನ್ನು ಭೇಟಿ ಮಾಡಿ ಲಂಚದ ರೂ.500/–ಗಳನ್ನು ಅವರಿಗೆ ನೀಡಿದೆ. ಅದನ್ನು ಬಲಗೈಯಿಂದ ಪಡೆದು ಅವರು ಷರ್ಟಿನ ಎಡ ಜೇಬಿನಲ್ಲಿ ಇರಿಸಿರುವುದನ್ನು ನೆರಳು ಸಾಕ್ಷಿಯಾದ 2ನೇ ಸಾಕ್ಷಿದಾರರು ಗಮನಿಸಿದರು. ನಂತರ ತಾನು ಹೊರ ಬಂದು ಪೋಲೀಸರಿಗೆ ಸಂಜ್ಞೆ ನೀಡಲಾಗಿ ಅವರು ಒಳ ಬಂದಾಗ 2ನೇ ಆರೋಪಿಯನ್ನು ತೋರಿಸಿದರು. ಪೋಲೀಸರು 2ನೇ ಆರೋಪಿಯ ಎರಡು ಕೈಗಳನ್ನು ತೊಳೆಯಲಾಗಿ ದ್ರಾವಣವು ಕೆಂಪು ಬಣ್ಣಕ್ಕೆ ತಿರುಗಿತು. ಲಂಚದ ಹಣವನ್ನು 2ನೇ ಆರೋಪಿಯ ಷರ್ಟಿನ ಜೇಬಿನಲ್ಲಿ ತೆಗೆಯಲಾಯಿತು. ಸಂಖ್ಯೆಗಳನ್ನು ಹೋಲಿಸಲಾಗಿ ಅವು ಹೊಂದಾಣಿಕೆ ಆದವು. ಆ ನಂತರ ಅವರು ಮೇಲಾಧಿಕಾರಿ ಕಛೇರಿಗೆ ಹೋಗಿ ಅವರನ್ನು ವಿಚಾರಿಸಿದರು.

3. ಆರೋಪಿತರಾದ ಶ್ರೀ ರವಿಚಂದು ರಾಥೋಡ್ ಅವರು ವಿಚಾರಣೆಯಲ್ಲಿ ಹಾಜರಿದ್ದರೂ ತಾನಾಗಲೀ ತನ್ನ ವಕೀಲರ ಮೂಲಕವಾಗಲಿ 1ನೇ ಸಾಕ್ಷಿದಾರರನ್ನು ಪಾಟೀ ಸವಾಲಿಗೆ ಒಳಪಡಿಸಲಿಲ್ಲ. ಆ ನಂತರವು ವಿಚಾರಣಾ ಅವಧಿಯಲ್ಲಿ ಪೂರ್ತಿ ಅವರು ಗೈರು ಹಾಜರಾಗಿಯೇ ಉಳಿದರು. 3ನೇ ಸಾಕ್ಷಿದಾರರೂ ಸಹ 2ನೇ ಸಾಕ್ಷಿಯು ರೂ.500/–ಗಳನ್ನು ಪಡೆದಿರುವುದನ್ನು ಖಚಿತಪಡಿಸಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿಸಿದ 5ನೇ ಸಾಕ್ಷಿದಾರರು ಲೋಕಾಯುಕ್ತ ಇನ್ಸ್‌ಪೆಕ್ಟರ್ ಅವರು ನೀಡಿದ ಹೇಳಿಕೆಯಂತೆ ಫಿರ್ಯಾದುದಾರರು ದಿನಾಂಕ: 02.08.2010 ರಲ್ಲಿ ತನ್ನ ಕಛೇರಿಗೆ ಬಂದು ಬೀದರ್ ಜಿಲ್ಲಾ ವಿಮಾಧಿಕಾರಿ ಹಾಗೂ ಅವರ ಕಛೇರಿಯ ದ್ವಿತೀಯ ದರ್ಜೆ ಸಹಾಯಕರು ತನಗೆ ರೂ.50,000/– ಸಾಲ ಮಂಜೂರು ಮಾಡಲು ರೂ.500/–ಗಳನ್ನ ಲಂಚ ಕೇಳುತ್ತಿದ್ದಾರೆಂದು ದೂರು ನೀಡಿದ ಮೇಲೆ ಅದನ್ನು ಖಚಿತಪಡಿಸುವ ಸಲುವಾಗಿ ಆತನಿಗೆ ಮೈಕ್ರೊ ರಿಕಾರ್ಡರ್ ನೀಡಿ ಕಛೇರಿಗೆ ಹೋಗಿ ಸಂಭಾಷಣೆಯನ್ನು ಧ್ವನಿಮುದ್ರಣ ಮಾಡಿ ತರುವಂತೆ ತಿಳಿಸಿದರು. 3ನೇ ತಾರೀಖಿನಂದು ಬಂದು ಫಿರ್ಯಾಧಿಯು ಧ್ವನಿ ಮುದ್ರಿತ ಕ್ಯಾಸೆಟ್‌ನ್ನು ಹಾಜರುಪಡಿಸಿ ದೂರನ್ನು ದಾಖಲಿಸಿದರು. ಎಲ್ಲಾ ಔಪಚಾರಿಕ ಕ್ರಿಯೆಗಳನ್ನು ನಡೆಸಿ ಫಿರ್ಯಾದಿಯ ಷರ್ಟಿನ ಎಡ ಜೇಬಿನಲ್ಲಿ ಹಣವನ್ನು ಇಟ್ಟು ಆ ನಂತರ ಟ್ರ್ಯಾಪ್ ನಡೆದ ಕುರಿತು ವಿವರಿಸಿದ್ದಾರೆ. ಆನಂತರ ತನಿಖಾಧಿಕಾರಿಯಾಗಿ ಕಾರ್ಯನಿರ್ವಹಿದ 4ನೇ ಸಾಕ್ಷಿದಾರ ತಾನೂ ಕೂಡಾ ಕ್ಯಾಸೆಟ್‌ನ್ನು ವಶಪಡಿಸಿಕೊಂಡು ಸಾಕ್ಷಿಗಳ ಹೇಳಿಕೆಯನ್ನು ದಾಖಲಿಸಿ ತರುವಾಯ ನ್ಯಾಯಾಲಯಕ್ಕೆ ಚಾರ್ಜ್‌ಷೀಟ್ ಸಲ್ಲಿಸಿರುವುದಾಗಿ ತಿಳಿಸಿದ್ದಾರೆ.

4. ಹೀಗೆ ಎಲ್ಲಾ ಸಾಕ್ಷಿಗಳೂ ಸಹ 2ನೇ ಆರೋಪಿಯು ಅಕ್ರಮ ಸಂಭಾವನೆ ಪಡೆದಿರುವುದನ್ನು ದೃಢಪಡಿಸಿದ್ದಾರೆ. ಅದರಲ್ಲೂ 1ನೇ ಮತ್ತು 3ನೇ ಸಾಕ್ಷಿಗಳು ಆರೋಪಿಯು ಲಂಚ ಸ್ವೀಕರಿಸಿರುವುದನ್ನು ಸ್ಪಷ್ಟವಾಗಿಯೇ ತಿಳಿಸಿದ್ದಾರೆ. 3ನೇ ಸಾಕ್ಷಿಯು ಫಿರ್ಯಾಧಿಯೊಡನೆ ಉರ್ದು ಭಾಷೆಯಲ್ಲಿ ಲಂಚ ಕೇಳಿದ್ದನ್ನು ಆನಂತರ ಫಿರ್ಯಾಧಿಯಿಂದ ಲಂಚ ಪಡೆದಿದ್ದನ್ನು ಸ್ಪಷ್ಟವಾಗಿಯೇ ನುಡಿಯುತ್ತಾರೆ. ಜಿಲ್ಲಾ ವಿಮಾಧಿಕಾರಿ ಪರವಾಗಿ ಈ ನೌಕರರು ಲಂಚದ ಹಣ ಸ್ವೀಕರಿಸಿದ್ದಾರೆ ಎಂಬುದನ್ನು ಅವರು ನಿರಾಕರಿಸುತ್ತಾರೆ. ಫಿರ್ಯಾದುದಾರರು ತನಿಖಾಧಿಕಾರಿ ಅವರುಗಳ ಸಾಕ್ಷ್ಯ ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿ ಈ ಪ್ರಕರಣದಲ್ಲಿ ಅಕ್ರಮ ಸಂಭಾವನೆಗೆ ಒತ್ತಾಯಿಸಿರುವುದು ಹಾಗೂ ಪಡೆದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹೀಗಾಗಿ ಆರೋಪ ಸಾಬೀತಾಗಿದೆ.

5. ಮೇಲಿನ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಉಪಲೋಕಾಯುಕ್ತರು ದಿನಾಂಕ 14.07.2015ರ ಪತ್ರದಲ್ಲಿ ಶಿಫಾರಸ್ಸು ನೀಡಿದರು. ವಿಚಾರಣಾ ವರದಿ ಮತ್ತು ಉಪಲೋಕಾಯುಕ್ತರ ಶಿಫಾರಸ್ಸುಗಳ ಪ್ರತಿಯೊಡನೆ ಆರೋಪಿತರಿಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ:29.08.2015ರ ಎರಡನೇ ನೋಟೀಸ್ ನೀಡಿ ವಿಚಾರಣಾ ವರದಿ ಹಾಗೂ ಉಪಲೋಕಾಯುಕ್ತರ ಶಿಫಾರಸ್ಸು ಕುರಿತು ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ರವಿಚಂದು ರಾಥೋಡ್, ದ್ವಿತೀಯ ದರ್ಜೆ ಸಹಾಯಕರು ನೋಟೀಸ್‌ನ್ನು ದಿನಾಂಕ: 28.09.2015 ರಂದು ಸ್ವೀಕರಿಸಿರುತ್ತಾರೆ. ಈ ನೋಟೀಸ್‌ಗೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಕರಣವನ್ನು ಪರಿಶೀಲಿಸಲಾಗಿದೆ.

6. ಫಿರ್ಯಾಧಿಯು ದಿನಾಂಕ 02.08.2010 ರಂದು ತನಿಖಾಧಿಕಾರಿ ಮುಂದೆ ಹಾಜರಾಗಿ ಶ್ರೀ ರವಿಚಂದು ರಾಥೋಡ್ ಅವರು ರೂ.500/–ಗಳ ಲಂಚಕ್ಕೆ ಒತ್ತಾಯಿಸುತ್ತಿದ್ದಾರೆಂದು ಸ್ಪಷ್ಟವಾಗಿ ದೂರಿದ್ದಾರೆ. ಆ ನಂತರ ನಡೆಸಲ್ಪಟ್ಟ ಧ್ವನಿ ಮುದ್ರಣದಲ್ಲಿ ಆರೋಪಿತರು ಲಂಚಕ್ಕೆ ಬೇಡಿಕೆ ಇಟ್ಟಿರುವುದು ಸ್ಪಷ್ಟವಾಗಿ ಮೂಡಿ ಬಂದಿದೆ. ಟ್ರ್ಯಾಪ್ ನಂತರದ ಮಹಜರ್‌ನಲ್ಲಿ ಆರೋಪಿತರು ಲಂಚ ಪಡೆದಿರುವುದನ್ನು ನಮೂದಿಸಲಾಗಿದೆ.

7. ವಿಚಾರಣಾ ಸಮಯದಲ್ಲಿ 1ನೇ, 3ನೇ ಮತ್ತು 5ನೇ ಸಾಕ್ಷಿದಾರರು ಆರೋಪಿತರು ಅಕ್ರಮ ಸಂಭಾವನೆಯನ್ನು ಬೇಡಿಕೆ ಇಟ್ಟು ಅದನ್ನು ಪಡೆದಿರುವುದನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ವಿಶ್ಲೇಷಿಸಲಾಗಿ ಶ್ರೀ ರವಿಚಂದು ರಾಥೋಡ್, ದ್ವಿತೀಯ ದರ್ಜೆ ಸಹಾಯಕರು ರೂ.50,000/–ಗಳ ಸಾಲ ಮಂಜೂರು ಮಾಡಲು ರೂ.500/–ಗಳ ಅಕ್ರಮ ಸಂಭಾವನೆ ಪಡೆದಿರುವುದು ಸ್ಪಷ್ಟವಾಗಿ ಮೂಡಿ ಬಂದಿದೆ. ಈ ಹಿನ್ನೆಲೆಯಲ್ಲಿ ಆರೋಪ ಸಾಬೀತಾಗಿದೆ ಎಂಬ ವಿಚಾರಣಾ ವರದಿ ಹಾಗೂ ಮಾನ್ಯ ಉಪಲೋಕಾಯುಕ್ತರು ಇವರ ಶಿಫಾರಸ್ಸು ಒಪ್ಪಿಕೊಂಡ ಸರ್ಕಾರವು ಅದರಂತೆ ದಂಡನೆ ವಿಧಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 41 ಕವಿಇ 2010, ಬೆಂಗಳೂರು, ದಿನಾಂಕ:06.01.2016**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11, 11ಎ ಮತ್ತು 14ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ರವಿಚಂದು ರಾಥೋಡ್, ದ್ವಿತೀಯ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೀದರ್ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR. 70**

## ತೋಟಗಾರಿಕೆ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಭೂ ಸ್ವಾಧೀನ ಮಾಡಿಕೊಳ್ಳುವ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳ ಮೌಲ್ಯಮಾಪನದ ದರವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ED/KSHDA/ADH-2/9/2015-16/449, ದಿ: 26.09.2015, 01.12.2015.

**ಪ್ರಸ್ತಾವನೆ:**

ಮೇಲೆ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ವಿವಿಧ ಉದ್ದೇಶಗಳಿಗಾಗಿ ರೈತರ/ಸರ್ಕಾರೇತರ/ಸರ್ಕಾರದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವಾಗ ಸದರಿ ಜಮೀನಿನಲ್ಲಿ ಇರುವ ತೋಟಗಾರಿಕೆ ಬೆಳೆಗಳಿಗೆ ಸೂಕ್ತವಾದ ಪರಿಹಾರ ನಿಗಧಿಪಡಿಸುವ ಸಲುವಾಗಿ ತೋಟಗಾರಿಕೆ ಬೆಳೆಗಳಿಗೆ ತಗಲುವ ವೆಚ್ಚ, ಬರುವ ಆದಾಯ ಇತ್ಯಾದಿಗಳನ್ನು ಲೆಕ್ಕ ಹಾಕಿ ಮಾಲ್ಕಿ ಮೌಲ್ಯಮಾಪನ ಧರವನ್ನು ಪರಿಷ್ಕರಿಸಲಾಗುತ್ತಿದೆ. ದಿ: 13.08.2013 ರ ಸರ್ಕಾರದ ಆದೇಶದಲ್ಲಿ ಈ ದರವನ್ನು ಪರಿಷ್ಕರಿಸಿದ್ದು, ಇದು 2014–15ರವರೆಗೆ ಚಾಲ್ತಿಯಲ್ಲಿರುತ್ತದೆ. ಈ ಮಾಲ್ಕಿ ಮೌಲ್ಯಮಾಪನ ಧರವನ್ನು ಪ್ರಸ್ತುತ 2015–16ನೇ ಸಾಲಿಗೆ ಪರಿಷ್ಕರಿಸಿ ಮಾರ್ಗಸೂಚಿಯನ್ನು ತಯಾರಿಸಬೇಕಾಗಿದ್ದು, ತೋಟಗಾರಿಕೆ ಕಾಮಗಾರಿಗಳ ದಿನಗೂಲಿ ದರವು ಕಾಲಕಾಲಕ್ಕೆ ಬದಲಾಗುತ್ತಿರುವುದರಿಂದ ಹಾಗೂ ಹೆಚ್ಚಾಗುತ್ತಿರುವುದರಿಂದ ಮೌಲ್ಯ ಮಾಪನ ದರವನ್ನು ಪರಿಷ್ಕರಿಸುವುದು ಅಗತ್ಯವಿದ್ದು, ಕನಿಷ್ಠ ಮೂರು ವರ್ಷಗಳಿಗೊಮ್ಮೆ ತೋಟಗಾರಿಕೆ ಬೆಳೆಗಳ ಮೌಲ್ಯಮಾಪನ ದರವನ್ನು ಪರಿಷ್ಕರಿಸುವುದು ಸೂಕ್ತವೆಂದು ಅಭಿಪ್ರಾಯಿಸಲಾಗಿದೆ. ಆದ್ದರಿಂದ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ತಗಲುವ ಖರ್ಚು, ವೆಚ್ಚ ಹೆಚ್ಚಾಗಿರುವ ಹಿನ್ನೆಲೆಯಲ್ಲಿ ತೋಟಗಾರಿಕೆ ನಿರ್ದೇಶಕರ ಅಧ್ಯಕ್ಷತೆಯಲ್ಲಿ ದಿ: 11.08.2015 ಮತ್ತು 27.08.2015 ಗಳಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಸಭೆಗಳಲ್ಲಿ ದರವನ್ನು ಸೂಕ್ತವಾಗಿ ಪರಿಷ್ಕರಿಸಲು ತೀರ್ಮಾನಿಸಿದ್ದು, ಅದರಂತೆ ಸಲ್ಲಿಸಿರುವ ಪರಿಷ್ಕೃತ ಮಾರ್ಗಸೂಚಿಗೆ ಅನುಮೋದನೆ ನೀಡುವಂತೆ ಹಾಗೂ ಸೂಕ್ತ ಆದೇಶ ಹೊರಡಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 665 ತೋಇವಿ 2015, ಬೆಂಗಳೂರು, ದಿನಾಂಕ: 31.12.2015.**

ವಿವಿಧ ಉದ್ದೇಶಗಳಿಗಾಗಿ ರೈತರ/ಸರ್ಕಾರೇತರ/ಸರ್ಕಾರದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವಾಗ ಸದರಿ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳ ಮೌಲ್ಯಮಾಪನವನ್ನು ಪರಿಷ್ಕರಿಸಿ 2015–16 ರಿಂದ 2017–18ರವರೆಗೆ ಅನುಬಂಧ–1ರಲ್ಲಿರುವ ದರದಂತೆ ಮತ್ತು ಅನುಬಂಧ–2ರಲ್ಲಿರುವ ಮಾರ್ಗಸೂಚಿಯಂತೆ ಬೆಲೆಯನ್ನು ನಿರ್ಧರಿಸಿ ಮೌಲ್ಯಮಾಪನ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜ್ಯೋತಿ ಆರ್. ಜೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

ಅನುಬಂಧ–1 ಭೂ ಸ್ವಾಧೀನ ಮಾಡಿಕೊಳ್ಳುವ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳಿಗೆ ಮೌಲ್ಯಮಾಪನ ಮಾಡಲು ಮಾರ್ಗಸೂಚಿ (2015–16)(2015–16 ರಿಂದ 2017–2018) ದಿನಾಂಕ 31.3.2018

ಮೌಲ್ಯ :– ಪ್ರತಿ ಮರಕ್ಕೆ ನೀಡಲಾಗಿದೆ. ಮೊತ್ತ:ರೂ. ಗಳಲ್ಲಿ

| ಕ್ರಮ ಸಂಖ್ಯೆ | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) Total non-recurring expenditure For One year | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ . Average annual recurring expenditure to be incurred during the pre-bearing period | ಮರದ ಮೂಲ ಬೆಲೆ Value of one tree | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರಕ್ಕೆ ತಗಲುವ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 |
| 1 | ಮಾವಿನ ಸಸಿ | 8 | 85.01 | 50.60 | 489.81 | 60 | 121.00 | **90.75** | 60.50 | 30.25 | 1718.75 | 1289.06 | 859.38 | 429.69 |
| 2. | ಮಾವಿನ ಕಸಿ | 4 | 255.02 | 142.31 | 824.27 | 55 | 242.00 | 181.50 | 121.00 | 60.50 | 3437.50 | 2578.13 | 1718.75 | 859.38 |
| 3. | ಮಾವಿನ ಕಸಿ ( ಅಧಿಕ ಸಾಂದ್ರ ಬೇಸಾಯ) **5mt x5 mt** ಅಂತರ | 4 | 228.40 | 129.60 | 746.80 | 25 | 229.00 | 171.75 | 114.50 | 57.25 | 1900.00 | 1425.00 | 950.00 | 475.00 |
| 4. | ಸಪೋಟ ಕಸಿ | 4 | 230.74 | 154.96 | 850.59 | 55 | 272.25 | 204.19 | 136.13 | 68.06 | 2234.38 | 1675.78 | 1117.19 | 558.59 |
| 5. | ಸೀಬೆ ಸಸಿ | 4 | 69.19 | 68.94 | 344.96 | 25 | 89.93 | 67.44 | 44.96 | 22.48 | 391.72 | 293.79 | 195.86 | 97.93 |
| 6. | ಸೀಬೆ ಕಸಿ | 3 | 108.30 | 62.68 | 296.33 | 20 | 134.89 | 101.17 | 67.44 | 33.72 | 545.00 | 408.75 | 272.50 | 136.25 |
| 7. | ಸೀಬೆ ಕಸಿ (ಅಧಿಕ ಸಾಂದ್ರ ಬೇಸಾಯ) **3mt x3 mt** ಅಂತರ | 3 | 98.00 | 59.36 | 276.08 | 15 | 124.90 | 93.68 | 62.45 | 31.23 | 300.00 | 225.00 | 150.00 | 75.00 |
| 8. | ಹಲಸು ಸಸಿ | 8 | 175.54 | 39.62 | 492.48 | 60 | 116.60 | 87.45 | 58.30 | 29.15 | 1987.50 | 1490.63 | 993.75 | 496.88 |
| 9. | ಹಲಸು ಕಸಿ | 4 | 234.05 | 60.95 | 477.85 | 60 | 145.75 | 109.31 | 72.88 | 36.44 | 2153.13 | 1614.84 | 1076.56 | 538.28 |
| 10. | ದಾಳಿಂಬೆ (ಗೂಟಿ) | 3 | 76.44 | 115.81 | 423.88 | 15 | 166.18 | 124.64 | 83.09 | 41.55 | 511.46 | 383.59 | 255.73 | 127.86 |
| 11. | ಸೀತಾಫಲ ಕಸಿ | 4 | 59.62 | 68.31 | 332.86 | 15 | 35.64 | 26.73 | 17.82 | 8.91 | 236.25 | 177.19 | 118.13 | 59.06 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 |
|---|---|---|---|---|---|---|---|---|---|---|---|---|---|---|
| 12. | ರಾಮಫಲ | 4 | 53.65 | 27.95 | 165.43 | 30 | 53.46 | 40.10 | 26.73 | 13.37 | 236.25 | 177.19 | 118.13 | 59.06 |
| 13. | ಚರಿಮೋಯ | 4 | 65.58 | 43.47 | 239.46 | 30 | 89.10 | 66.83 | 44.55 | 22.28 | 405.00 | 303.75 | 202.50 | 101.25 |
| 14. | ಅಟಮೋಯ | 4 | 65.58 | 43.47 | 239.46 | 30 | 68.31 | 51.23 | 34.16 | 17.08 | 405.00 | 303.75 | 202.50 | 101.25 |
| 15. | ನಿಂಬೆ ಸಸಿ | 3 | 65.58 | 62.10 | 251.88 | 15 | 178.20 | 133.65 | 89.10 | 44.55 | 438.75 | 329.06 | 219.38 | 109.69 |
| 16. | ನಿಂಬೆ ಬಡೆಡ್ | 3 | 83.46 | 77.63 | 316.34 | 15 | 213.84 | 160.38 | 106.92 | 53.46 | 526.50 | 394.88 | 263.25 | 131.63 |
| 17. | ಸಿಹಿ ನಿಂಬೆ | 3 | 83.46 | 77.63 | 316.34 | 15 | 178.20 | 133.65 | 89.10 | 44.55 | 405.00 | 303.75 | 202.50 | 101.25 |
| 18. | ಗಜನಿಂಬೆ | 3 | 89.42 | 80.73 | 331.61 | 15 | 178.20 | 133.65 | 89.10 | 44.55 | 421.88 | 316.41 | 210.94 | 105.47 |
| 19. | ಕೊಡಗು ಕಿತ್ತಳೆ | 4 | 95.39 | 83.84 | 430.73 | 20 | 190.08 | 142.56 | 95.04 | 47.52 | 506.25 | 379.69 | 253.13 | 126.56 |
| 20. | ಕಿತ್ತಳೆ | 4 | 95.39 | 83.84 | 430.73 | 15 | 190.08 | 142.56 | 95.04 | 47.52 | 506.25 | 379.69 | 253.13 | 126.56 |
| 21. | ಹೇರಳೆ | 4 | 83.46 | 62.10 | 331.86 | 20 | 103.95 | 77.96 | 51.98 | 25.99 | 405.00 | 303.75 | 202.50 | 101.25 |
| 22. | ಸಿಟ್ರಾನ್ (ಮಾದಳ) | 3 | 83.46 | 77.63 | 316.34 | 15 | 103.95 | 77.96 | 51.98 | 25.99 | 641.25 | 480.94 | 320.63 | 160.31 |
| 23. | ಚಕ್ಕೋತ | 4 | 95.39 | 83.84 | 430.73 | 20 | 178.20 | 133.65 | 89.10 | 44.55 | 506.25 | 379.69 | 253.13 | 126.56 |
| 24. | ಅಂಜೂರ (ಗೂಟಿ) | 3 | 90.25 | 68.94 | 297.08 | 15 | 59.95 | 44.96 | 29.98 | 14.99 | 177.13 | 132.84 | 88.56 | 44.28 |
| 25. | ನೆಲ್ಲಿ ಸಸಿ | 5 | 29.81 | 21.74 | 138.48 | 50 | 32.67 | 24.50 | 16.34 | 8.17 | 186.44 | 139.83 | 93.22 | 46.61 |
| 26. | ನೆಲ್ಲಿ ಕಸಿ | 3 | 59.62 | 27.95 | 143.45 | 40 | 35.55 | 26.66 | 17.78 | 8.89 | 225.07 | 168.80 | 112.54 | 56.27 |
| 27. | ಹುಣಸೆ ಸಸಿ | 10 | 89.42 | 24.84 | 337.82 | 60 | 89.10 | 66.83 | 44.55 | 22.28 | 3246.33 | 2434.75 | 1623.17 | 811.58 |
| 28. | ಹುಣಸೆ ಕಸಿ | 4 | 104.33 | 49.68 | 303.05 | 50 | 106.92 | 80.19 | 53.46 | 26.73 | 3796.88 | 2847.66 | 1898.44 | 949.22 |
| 29. | ದ್ರಾಕ್ಷಿ | | | | | | | | | | | | | |
| | 1. ಬೆಂಗಳೂರು ನೀಲಿ | 1.5 | 145.73 | 569.25 | 999.60 | 15 | 393.25 | 294.94 | 196.63 | 98.31 | 893.75 | 670.31 | 446.88 | 223.44 |
| | 2. ಬೀಜ ರಹಿತ ತಳಿ | | | | | | | | | | | | | |
| | a.6x4 1815 ಬಳ್ಳಿ | 1.5 | 72.86 | 101.20 | 224.66 | 15 | 96.80 | 72.60 | 48.40 | 24.20 | 385.00 | 288.75 | 192.50 | 96.25 |
| | b.6x6 1210 ಬಳ್ಳಿ | 1.5 | 75.90 | 88.55 | 208.73 | 15 | 116.16 | 87.12 | 58.08 | 29.04 | 429.00 | 321.75 | 214.50 | 107.25 |
| | 3. ಬಿಳಿದ್ರಾಕ್ಷಿ ತಳಿ | 1.5 | 75.90 | 221.38 | 407.96 | 15 | 159.72 | 119.79 | 79.86 | 39.93 | 445.50 | 334.13 | 222.75 | 111.38 |
| | 4. ಅನಾಬ್–ಇ–ಷಾಹಿ | 1.5 | 91.08 | 632.50 | 1039.83 | 15 | 484.00 | 363.00 | 242.00 | 121.00 | 1117.19 | 837.89 | 558.59 | 279.30 |
| | 5. ದ್ರಾಕ್ಷಿ ವೈನ್ ತಳಿ | 2 | 321.78 | 152.14 | 626.06 | 25 | 152.14 | 114.11 | 76.07 | 38.04 | 240.00 | 180.00 | 120.00 | 60.00 |
| 30. | ಬೆಣ್ಣೆ ಹಣ್ಣು | 6 | 179.68 | 120.75 | 904.18 | 50 | 101.06 | 75.80 | 50.53 | 25.27 | 472.50 | 354.38 | 236.25 | 118.13 |
| 31. | ಬ್ರೆಡ್ ಪ್ರೂಟ್ | 8 | 153.59 | 30.19 | 395.09 | 50 | 101.06 | 75.80 | 50.53 | 25.27 | 472.50 | 354.38 | 236.25 | 118.13 |
| 32. | ಬೋರೆ ಹಣ್ಣು (ಕಸಿ) | 3 | 86.94 | 54.34 | 249.95 | 25 | 98.18 | 73.63 | 49.09 | 24.54 | 787.50 | 590.63 | 393.75 | 196.88 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 |
|---|---|---|---|---|---|---|---|---|---|---|---|---|---|---|
| 33. | ಕಾಡು ಬೋರೆ | 7 | 34.78 | 30.19 | 246.09 | 25 | 23.10 | 17.33 | 11.55 | 5.78 | 229.69 | 172.27 | 114.84 | 57.42 |
| 34. | ಪನ್ನೇರಳೆ | 5 | 86.94 | 51.32 | 343.53 | 40 | 86.63 | 64.97 | 43.31 | 21.66 | 590.63 | 442.97 | 295.31 | 147.66 |
| 35. | ಮಲಯನ್ ಆಪಲ್ | 6 | 86.94 | 51.32 | 394.85 | 40 | 86.63 | 64.97 | 43.31 | 21.66 | 590.63 | 442.97 | 295.31 | 147.66 |
| 36. | ಮರಸೇಬು | 8 | 52.16 | 33.21 | 317.81 | 70 | 63.53 | 47.64 | 31.76 | 15.88 | 479.06 | 359.30 | 239.53 | 119.77 |
| 37. | ನೇರಳೆ ಸಸಿ | 8 | 56.64 | 40.37 | 379.56 | 40 | 66.53 | 49.90 | 33.26 | 16.63 | 567.00 | 425.25 | 283.50 | 141.75 |
| 38. | ನೇರಳೆ ಕಸಿ | 4 | 131.16 | 108.68 | 565.86 | 40 | 123.55 | 92.66 | 61.78 | 30.89 | 680.40 | 510.30 | 340.20 | 170.10 |
| 39. | ಖರ್ಜೂರ | 10 | 214.45 | 54.34 | 757.83 | 80 | 80.85 | 60.64 | 40.43 | 20.21 | 393.75 | 295.31 | 196.88 | 98.44 |
| 40. | ಲಿಚ್ಚಿ | 7 | 144.90 | 42.26 | 440.74 | 50 | 80.85 | 60.64 | 40.43 | 20.21 | 787.50 | 590.63 | 393.75 | 196.88 |
| 41. | ಫಾಲ್ಸ | 4 | 26.08 | 9.06 | 62.31 | 20 | 28.88 | 21.66 | 14.44 | 7.22 | 78.75 | 59.06 | 39.38 | 19.69 |
| 42. | ಲಕ್ವಾಟ್ | 8 | 78.25 | 21.13 | 247.30 | 30 | 69.30 | 51.98 | 34.65 | 17.33 | 229.69 | 172.27 | 114.84 | 57.42 |
| 43. | ಕಮರಕ್ | 5 | 60.86 | 27.17 | 196.70 | 30 | 66.41 | 49.81 | 33.21 | 16.60 | 492.19 | 369.14 | 246.09 | 123.05 |
| 44. | ಬಿಳಿಂಬಿ | 4 | 52.16 | 24.15 | 148.76 | 20 | 51.98 | 38.98 | 25.99 | 12.99 | 157.50 | 118.13 | 78.75 | 39.38 |
| 45. | ಕಿರುನೆಲ್ಲಿ | 4 | 26.58 | 18.46 | 100.41 | 20 | 44.14 | 33.10 | 22.07 | 11.03 | 200.63 | 150.47 | 100.31 | 50.16 |
| 46. | ಬಾರ್ಬಡಾಸ್ ಚೆರ್ರಿ | 3 | 26.08 | 21.13 | 89.48 | 20 | 40.43 | 30.32 | 20.21 | 10.11 | 78.75 | 59.06 | 39.38 | 19.69 |
| 47. | ಬ್ರೆಜಿಲಿಯನ್ ಚೆರ್ರಿ | 4 | 26.08 | 24.15 | 122.68 | 20 | 40.43 | 30.32 | 20.21 | 10.11 | 78.75 | 59.06 | 39.38 | 19.69 |
| 48. | ಸಿಂಗಪೂರ್ ಚೆರ್ರಿ | 3 | 26.08 | 18.11 | 80.42 | 15 | 28.88 | 21.66 | 14.44 | 7.22 | 42.66 | 31.99 | 21.33 | 10.66 |
| 49. | ಅಮ್ಟೆ | 7 | 57.96 | 18.11 | 184.75 | 50 | 40.43 | 30.32 | 20.21 | 10.11 | 236.25 | 177.19 | 118.13 | 59.06 |
| 50. | ಮುಳ್ಳು ರಾಮಫಲ | 6 | 57.96 | 42.26 | 311.54 | 30 | 66.41 | 49.81 | 33.21 | 16.60 | 157.50 | 118.13 | 78.75 | 39.38 |
| 51. | ತೆಂಗು | | | | | | | | | | | | | |
| | 1. ಗಿಡ್ಡತಳಿ | 4 | 254.75 | 123.83 | 750.08 | 40 | 199.80 | 149.85 | 99.90 | 49.95 | 1240.08 | 930.06 | 620.04 | 310.02 |
| | 2. ಎತ್ತರ ತಳಿ | 7 | 264.93 | 123.83 | 1131.78 | 60 | 159.84 | 119.88 | 79.92 | 39.96 | 1984.13 | 1488.09 | 992.06 | 496.03 |
| | 3. ಸಂಕರಣ ತಳಿ | 4 | 288.71 | 123.83 | 784.05 | 50 | 175.82 | 131.87 | 87.91 | 43.96 | 2380.95 | 1785.71 | 1190.48 | 595.24 |
| 52. | ಅಡಿಕೆ | 5 | 109.30 | 88.55 | 552.05 | 35 | 187.55 | 140.66 | 93.78 | 46.89 | 601.56 | 451.17 | 300.78 | 150.39 |
| 53. | ಕೊಕೋ | 3 | 95.39 | 80.73 | 337.58 | 25 | 172.26 | 129.20 | 86.13 | 43.07 | 590.63 | 442.97 | 295.31 | 147.66 |
| 54. | ಗೋಡಂಬಿ ಸಸಿ | 6 | 84.24 | 50.14 | 385.08 | 50 | 89.93 | 67.44 | 44.96 | 22.48 | 647.19 | 485.39 | 323.59 | 161.80 |
| 55. | ಗೋಡಂಬಿ ಕಸಿ | 4 | 135.38 | 68.94 | 411.15 | 50 | 97.12 | 72.84 | 48.56 | 24.28 | 698.96 | 524.22 | 349.48 | 174.74 |
| 56. | ಏಲಕ್ಕಿ | 2 | 238.46 | 62.10 | 362.66 | 10 | 83.16 | 62.37 | 41.58 | 20.79 | 182.25 | 136.69 | 91.13 | 45.56 |
| 57. | ಕರಿಮೆಣಸು | | | | | | | | | | | | | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 |
|---|---|---|---|---|---|---|---|---|---|---|---|---|---|---|
| | 1. ಸ್ಥಳೀಯ ತಳಿ | 3 | 47.69 | 55.89 | 215.36 | 20 | 133.65 | 100.24 | 66.83 | 33.41 | 519.75 | 389.81 | 259.88 | 129.94 |
| | 2. ಸಂಕರಣ ತಳಿ | 3 | 59.62 | 65.21 | 255.23 | 20 | 133.65 | 100.24 | 66.83 | 33.41 | 742.50 | 556.88 | 371.25 | 185.63 |
| **58.** | **ವಿಳ್ಳೆದೆಲೆ** | | | | | | | | | | | | | |
| | 1. 10000ಗಿಡ/ಎಕರೆ | 2 | 11.92 | 9.32 | 30.55 | 8 | 5.94 | 4.46 | 2.97 | 1.49 | 13.50 | 10.13 | 6.75 | 3.38 |
| | 2. 4000ಗಿಡ/ಎಕರೆ | 1 | 14.90 | 17.08 | 31.98 | 8 | 8.91 | 6.68 | 4.46 | 2.23 | 27.00 | 20.25 | 13.50 | 6.75 |
| 59. | ವೆನಿಲ್ಲಾ | 4 | 49.74 | 85.33 | 391.06 | 12 | 116.60 | 87.45 | 58.30 | 29.15 | 3312.50 | 2484.38 | 1656.25 | 828.13 |
| 60. | ಕಾಫಿ | | | | | | | | | | | | | |
| | 1. ಅರೇಬಿಕ ಕಾಪಿ | 4 | 47.69 | 86.94 | 395.45 | 40 | 35.64 | 26.73 | 17.82 | 8.91 | 47.25 | 35.44 | 23.63 | 11.81 |
| | 2. ರೋಬಸ್ಟಾ ಕಾಫಿ | 4 | 50.67 | 86.94 | 398.43 | 40 | 35.64 | 26.73 | 17.82 | 8.91 | 47.25 | 35.44 | 23.63 | 11.81 |
| 61. | ದಾಲ್ಚಿನ್ನಿ | 6 | 115.92 | 69.43 | 532.51 | 60 | 167.48 | 125.61 | 83.74 | 41.87 | 689.06 | 516.80 | 344.53 | 172.27 |
| 62. | ಜಾಯಿಕಾಯಿ | 8 | 115.92 | 69.43 | 671.37 | 60 | 167.48 | 125.61 | 83.74 | 41.87 | 2165.63 | 1624.22 | 1082.81 | 541.41 |
| 63. | ಸರ್ವ ಸಾಂಬಾರು | 8 | 115.92 | 69.43 | 671.37 | 70 | 167.48 | 125.61 | 83.74 | 41.87 | 2165.63 | 1624.22 | 1082.81 | 541.41 |
| 64. | ಲವಂಗ ಸಸಿ | 8 | 134.58 | 85.33 | 817.22 | 60 | 169.07 | 126.80 | 84.54 | 42.27 | 2385.00 | 1788.75 | 1192.50 | 596.25 |
| 65. | ಲವಂಗ ಕಸಿ | 5 | 152.13 | 97.52 | 639.73 | 60 | 169.07 | 126.80 | 84.54 | 42.27 | 2385.00 | 1788.75 | 1192.50 | 596.25 |
| 66. | ಬಾದಾಮಿ(ಕಾಡು ಬಾದಾಮಿ) | 7 | 40.57 | 30.19 | 251.88 | 60 | 34.65 | 25.99 | 17.33 | 8.66 | 157.50 | 118.13 | 78.75 | 39.38 |
| 67. | ಕರ್ಪೂರ | 6 | 75.35 | 30.19 | 256.47 | 60 | 46.20 | 34.65 | 23.10 | 11.55 | 157.50 | 118.13 | 78.75 | 39.38 |
| 68. | ನುಗ್ಗೆ | 2 | 35.44 | 27.69 | 90.81 | 15 | 58.85 | 44.14 | 29.43 | 14.71 | 321.00 | 240.75 | 160.50 | 80.25 |
| 69. | ಕರಿಬೇವು | 2 | 44.30 | 27.69 | 99.67 | 20 | 82.39 | 61.79 | 41.20 | 20.60 | 481.50 | 361.13 | 240.75 | 120.38 |
| 70. | ಬರ್ಸೆರ | 1 | 52.16 | 24.15 | 76.31 | 50 | 20.21 | 15.16 | 10.11 | 5.05 | 118.13 | 88.59 | 59.06 | 29.53 |
| 71. | ಗುಲಾಬಿ | 1 | 134.14 | 43.47 | 177.61 | 6 | 35.64 | 26.73 | 17.82 | 8.91 | 135.00 | 101.25 | 67.50 | 33.75 |
| 72. | ಮಲ್ಲಿಗೆ | | | | | | | | | | | | | |
| | 1. ಗುಂಡು ಮಲ್ಲಿಗೆ, ಕಾಕಡ ಮತ್ತು ಇತರೆ | 1 | 53.65 | 12.42 | 66.07 | 6 | 35.64 | 26.73 | 17.82 | 8.91 | 135.00 | 101.25 | 67.50 | 33.75 |
| | 2.ಬಳ್ಳಿ ಗ್ರಾಂಡಿಪ್ಲೋರಾ, ಜಾಜಿ ಮತ್ತು ಇತರೆ | 1 | 26.83 | 43.47 | 70.30 | 15 | 47.52 | 35.64 | 23.76 | 11.88 | 236.25 | 177.19 | 118.13 | 59.06 |
| 73. | ಕನಕಾಂಬರ | 1 | 7.38 | 4.61 | 12.00 | 4 | 5.89 | 4.41 | 2.94 | 1.47 | 26.75 | 20.06 | 13.38 | 6.69 |
| 74. | ಸಂಪಿಗೆ | 3 | 99.47 | 42.67 | 227.47 | 50 | 75.79 | 56.84 | 37.90 | 18.95 | 1192.50 | 894.38 | 596.25 | 298.13 |
| 75. | ತಾಳೆ | 4 | 324.91 | 263.24 | 1377.85 | 30 | 209.83 | 157.37 | 104.91 | 52.46 | 1737.19 | 1302.89 | 868.59 | 434.30 |

**ಅನುಬಂಧ–2**

**ಕರ್ನಾಟಕ ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನದ ಪರಿಷ್ಕೃತ ಮಾರ್ಗಸೂಚಿ (2015–16)**

ಸರ್ಕಾರದ ಆದೇಶ ಮತ್ತು ಆಚರಣೆಯಲ್ಲಿರುವಂತೆ ಭೂ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿರುವ ಬೆಳೆಗಳಿಗೆ ತೋಟಗಾರಿಕೆ ಇಲಾಖೆಯ ಅಧಿಕಾರಿಗಳ ಶಿಫಾರಸ್ಸಿನಂತೆ ಭೂ ಸ್ವಾಧೀನ ಕಾಯ್ದೆಯನ್ವಯ ಬೆಲೆ ನಿಗಧಿಪಡಿಸಿ, ಪರಿಹಾರವನ್ನು ಸಂಬಂಧಿಸಿದ ಬೆಳೆಗಾರನಿಗೆ ನೀಡಲಾಗುತ್ತಿದೆ. ಅದರಂತೆ ತೋಟಗಾರಿಕೆ ಇಲಾಖೆಯು ಭೂ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿನ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನ ಮಾಡಲು ಹಲವಾರು ಪ್ರಯತ್ನಗಳನ್ನು ಮಾಡಿ ಒಂದು ತರ್ಕ ಸಮ್ಮತವಾದ ಮಾರ್ಗಸೂಚಿಯನ್ನು ನಿಗಧಿಪಡಿಸಿರುತ್ತದೆ. ಸಾಮಾನ್ಯವಾಗಿ ಪ್ರತಿ 5 ವರ್ಷಗಳಿಗೊಮ್ಮೆ ಈ ಮಾರ್ಗಸೂಚಿಯನ್ನು ಪರಿಷ್ಕರಿಸಲಾಗುತ್ತಿದ್ದು, ಪ್ರಸ್ತುತ ಆಚರಣೆಯಲ್ಲಿರುವ ಮಾರ್ಗಸೂಚಿಯನ್ನು 2013ರಲ್ಲಿ ಪರಿಷ್ಕರಿಸಲಾಗಿದೆ. ಪ್ರತಿ ವರ್ಷವು ತೋಟಗಾರಿಕೆ ಬೆಳೆಗಳ ನಿರ್ವಹಣೆ ವೆಚ್ಚ ಗಣನೀಯವಾಗಿ ಹೆಚ್ಚುತ್ತಿದ್ದು, ಆದಾಯವು ಅಲ್ಪ ಪ್ರಮಾಣದಲ್ಲಿ ವೃದ್ಧಿಸುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ, 2013ರಲ್ಲಿ ಪರಿಷ್ಕರಿಸಲಾಗಿದ್ದ ಮಾರ್ಗಸೂಚಿಯನ್ನು 2015–16ನೇ ಸಾಲಿಗೆ ಪರಿಷ್ಕರಿಸಿ ನೀಡಲಾಗಿದೆ.

**ಮೌಲ್ಯಮಾಪನ ಕಾರ್ಯ ವಿಧಾನ:–**

ಮೌಲ್ಯಮಾಪನವು ವೈಜ್ಞಾನಿಕವಾಗಿ ನಿಖರವಾಗಿದ್ದಲ್ಲಿ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮೌಲ್ಯಮಾಪನಕ್ಕೆ ಸಂಬಂಧಿಸಿದ ಹಲವಾರು ಅಂಶಗಳನ್ನು ಯಾವುದೇ ವಿಳಂಭವಿಲ್ಲದೆ ಸಾಧಿಸಬಹುದಾಗಿರುತ್ತದೆ. ಮರಗಳ ಮೌಲ್ಯಮಾಪನವು ಮುಖ್ಯವಾಗಿ ಆ ಬೆಳೆಗೆ ಫಸಲು ಬಿಡುವ ತನಕ ಮಾಡಿರುವ ವೆಚ್ಚ ಹಾಗೂ ಮರವು ಜೀವಿತ ಅವಧಿಯ ಉಳಿದ ವರ್ಷಗಳಲ್ಲಿ ಬೆಳೆಗಾರನಿಗೆ ಆದಾಯ ನೀಡುವಲ್ಲಿನ ಸಾಮರ್ಥ್ಯದ ಮೇಲೆ ಅವಲಂಭಿತವಾಗಿರುತ್ತದೆ.

ತೋಟಗಾರಿಕೆ ಬೆಳೆಗಳ ಮೌಲ್ಯಮಾಪನದಲ್ಲಿ 2 ಹಂತಗಳಿರುತ್ತವೆ.

1) ಫಸಲು ಬಿಡುವ ಪೂರ್ವಾವದಿ, (Pre bearing stage)

2) ಫಸಲು ನೀಡುವ ಅವಧಿ(Bearing stage)

ಈ ಎರಡು ಹಂತಗಳಲ್ಲಿ ಬೆಳೆಗಳ/ಮರಗಳ ಮೌಲ್ಯವನ್ನು ವಿವಿಧ ಸೂತ್ರಗಳನ್ನು ಅಳವಡಿಸಿಕೊಂಡು ಕಂಡು ಹಿಡಿಯಬಹುದಾಗಿರುತ್ತದೆ.

**I. ಫಸಲು ಬಿಡುವ ಪೂರ್ವಾವಧಿ (Pre bearing stage)ಯ ಹಂತದಲ್ಲಿನ ಮೌಲ್ಯಮಾಪನ:**

ಈ ಹಂತದಲ್ಲಿ ತೋಟಗಾರಿಕೆ ಬೆಳೆಯನ್ನು ಬೆಳೆಯುವಾಗ ಸಂಭವಿಸುವ ವೆಚ್ಚವನ್ನು 2 ಭಾಗಗಳಾಗಿ ಈ ಕೆಳಕಂಡಂತೆ ವಿಭಜಿಸಲಾಗಿದೆ.

1) ಪುನರ್ಘಟಿಸದ ವೆಚ್ಚ (Non Recurring Expenditure)

2) ಪುನರ್ಘಟಿಸುವ ವೆಚ್ಚ (Recurring Expenditure)

**1. ಪುನರ್ಘಟಿಸದ ವೆಚ್ಚ** (Non Recurring Expenditure)

ಹೊಸದಾಗಿ ತೋಟ ನಿರ್ಮಾಣ ಮಾಡುವಾಗ ಭೂಮಿ ತಯಾರಿಸುವುದು, ಲೇಔಟ್ ಮಾಡುವುದು, ಗುಂಡಿ ತೆಗೆದು ಮುಚ್ಚುವುದು, ಗಿಡಗಳ ವೆಚ್ಚ (ಸಾಗಾಣಿಕೆ ಸೇರಿದಂತೆ), ಗಿಡ ನೆಡುವುದು ಇತ್ಯಾದಿ ಕಾರ್ಯಗಳನ್ನು ಮಾಡಲು ತಗಲುವ ವೆಚ್ಚವನ್ನು ಪುನರ್ಘಟಿಸದ ವೆಚ್ಚ (Non Recurring Expenditure) ಎಂದು ಕರೆಯುತ್ತೇವೆ. ಇದು ಬೆಳೆಯಿಂದ ಬೆಳೆಗೆ ಬದಲಾವಣೆಯಾಗುತ್ತದೆ. ಈ ವೆಚ್ಚವನ್ನು ಅನುಬಂಧ–1ರಲ್ಲಿ ಒದಗಿಸಲಾಗಿದೆ.

**2. ಪುನರ್ಘಟಿಸುವ ವೆಚ್ಚ (Recurring Expenditure):–**

ಇದು ವಾರ್ಷಿಕ ವೆಚ್ಚವಾಗಿದ್ದು, ವಿವಿಧ ಬೇಸಾಯ ಕಾರ್ಯಕ್ರಮಗಳಾದ ಅಂತರಬೇಸಾಯ, ಕಳೆ ತೆಗೆಯುವುದು, ಸಾವಯವ ಹೊದಿಕೆ, ನೀರಾವರಿ, ಗೊಬ್ಬರ ಹಾಕುವುದು, ಸಸ್ಯ ಸಂರಕ್ಷಣೆ ಇತ್ಯಾದಿಗಳಿಗೆ ತಗಲುವ ವೆಚ್ಚವಾಗಿರುತ್ತದೆ. ಪ್ರತಿ ಬೆಳೆಗೆ ತಗಲುವ ವೆಚ್ಚವನ್ನು ಅನುಬಂಧ–1ರಲ್ಲಿ ಒದಗಿಸಲಾಗಿದೆ.

ಅದರಂತೆ ಫಸಲು ಬಿಡುವ ಪೂರ್ವಾವಧಿಯಲ್ಲಿ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನ ನಿರ್ಧರಿಸಲು ಈ ಕೆಳಕಂಡ ಸೂತ್ರವನ್ನು ಉಪಯೋಗಿಸಬೇಕು.

| | | | | | | |
|---|---|---|---|---|---|---|
| ಫಸಲು ಬಿಡುಬ ಪೂರ್ವಾವಧಿಯಲ್ಲಿನ ಮರಗಳ ಮಾಲ್ಕಿ ಮೌಲ್ಯ | = | ಪುನರ್ಘಟಿಸದ ವೆಚ್ಚ | + | [ ಮರದ ವಯಸ್ಸು | x | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ಘಟಿಸುವ ಸರಾಸರಿ ವಾರ್ಷಿಕ ವೆಚ್ಚ ] |
| Valuation of Compensation during Pre-Bearing stage | = | Non-recurring Expenditure | + | [ Age of the Tree | x | Average Annual Recurring Expenditure during the pre-bearing stage ] |

II. **ಫಸಲು ಬಿಡುವ ಅವಧಿಯಲ್ಲಿ** (Bearing stage)**ಮೌಲ್ಯಮಾಪನ:–**

ಫಸಲು ಬಿಡುವ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಬೆಲೆ ಕಂಡು ಹಿಡಿಯುವುದು ಫಸಲು ಬಿಡುವ ಪೂರ್ವಾವಧಿಯಲ್ಲಿನ ಬೆಲೆಯನ್ನು ಕಂಡು ಹಿಡಿಯುವಷ್ಟು ಸುಲಭವಲ್ಲ. ಏಕೆಂದರೆ ಹಲವಾರು ಅಂಶಗಳು ಈ ಹಂತದಲ್ಲಿ ಅಡಕವಾಗಿದ್ದು ಅವುಗಳನ್ನು ಸಹ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ.

ಅದರಂತೆ, ಫಸಲು ಬಿಡುವ ಅವಧಿಯಲ್ಲಿನ ಮರಗಳ ಮಾಲ್ಕಿ ಮೌಲ್ಯಮಾಪನದ ಒಟ್ಟು ಮೊತ್ತ ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ.

1. ಮರದ ಮೂಲ ಬೆಲೆ (Basic value of the tree)
2. ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳ ಪರಿಹಾರದ ಮೊತ್ತ (Value of compensation for the remaining years of the economic bearing period) ಮರಮುಟ್ಟು /ಉರುವಲಿಗೆ (Timber/Fire wood) ಉಪಯೋಗಿಸುವ ಮರದ ಭಾಗವನ್ನು ಮೌಲ್ಯಮಾಪನ ನಿಗಧಿಪಡಿಸುವಾಗ ಗಣನೆಗೆ ತೆಗೆದುಕೊಂಡಿರುವುದಿಲ್ಲ.

ಈ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಮಾಡುವಾಗ ಕೆಳಕಂಡ ಮೌಲ್ಯಗಳನ್ನು ಕಂಡು ಹಿಡಿದ ನಂತರ ಮೌಲ್ಯಮಾಪನ ಮಾಡುವ ಮರದ ಪ್ರಸಕ್ತ ಬೆಲೆಯನ್ನು ಕಂಡು ಹಿಡಿಯಲು ಸುಲಭವಾಗುತ್ತದೆ.

I. **ಮರದ ಮೂಲ ಬೆಲೆ (Basic value of the tree):–**

ಫಲ ಬಿಡುವ ಪೂರ್ವಾವಧಿಯಲ್ಲಿ ಮಾಡಿರುವ ವೆಚ್ಚದ ಒಟ್ಟು ಮೊತ್ತವನ್ನು ಆ ಮರದ ಮೂಲ ಬೆಲೆಯೆಂದು ಕರೆಯುತ್ತೇವೆ. ಈ ಕೆಳಗಿನ ಸೂತ್ರದಿಂದ ಮರದ ಮೂಲ ಬೆಲೆಯನ್ನು (**Basic values)** ಕಂಡು ಹಿಡಿಯಬಹುದು.

ಮೂಲ ಬೆಲೆ = ಪುನರ್ಘಟಿಸದ ವೆಚ್ಚ + { ಫಸಲು ಬಿಡುವ ಪೂರ್ವವಧಿ x ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ಘಟಿಸುವ ಸರಾಸರಿ ವಾರ್ಷಿಕ ವೆಚ್ಚ }

Basic Value = Non-recurring Expenditure + { Length of the pre- bearing Period x Average annual Re-curring Expenditure to be incurred during the prebearing stage }

ಮೌಲ್ಯಮಾಪನ ಮಾಡುವ ಅಧಿಕಾರಿ ಈ ಸೂತ್ರವನ್ನು ಉಪಯೋಗಿಸುವ ಅಗತ್ಯವಿರುವುದಿಲ್ಲ. ಏಕೆಂದರೆ ಸಿದ್ದಪಡಿಸಿದ ಮೂಲ ಬೆಲೆಯನ್ನು ಅನುಬಂಧ–1ರಲ್ಲಿ ನೀಡಲಾಗಿದೆ.

II. **ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳ ಪರಿಹಾರದ ಮೊತ್ತ (Value of compensation for the remaining years of the economic bearing period).**

ಫಸಲು ಬಿಡುವ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಕಾರ್ಯವು ತೀಕ್ಷ್ಣವಾಗಿ ಅವಲೋಕಿಸುವಂತಹ ಜಟಿಲವಾದ ಅಂಶವಾಗಿರುತ್ತದೆ. ಮರಗಳಿಗೆ ನೈಜ ಬೆಲೆಯನ್ನು ಕಂಡು ಹಿಡಿಯಬೇಕಾದಲ್ಲಿ, ಇದರಲ್ಲಿ ಅಡಕವಾಗಿರುವ ಅಂಶಗಳನ್ನು ಅಥವಾ ಸೂತ್ರಗಳನ್ನು ಎಚ್ಚರಿಕೆಯಿಂದ ಅಭ್ಯಸಿಸಿ, ಬೆಲೆ ನಿಗಧಿ ಪಡಿಸಬೇಕಾಗಿರುತ್ತದೆ. ಈ ಬೆಲೆಯನ್ನು ನಿಗಧಿಪಡಿಸಲು ಅವಶ್ಯವಿರುವ ಅಂಶಗಳು ಈ ಕೆಳಕಂಡಂತಿದೆ.

a) **ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿನ ಉಳಿದ ವರ್ಷಗಳು (No. of remaining years in the economic bearing period)**

ಯಾವ ತೋಟಗಾರಿಕೆ ಗಿಡವನ್ನು ಮೌಲ್ಯಮಾಪನ ಮಾಡಲಾಗುತ್ತಿದೆಯೋ ಆ ಗಿಡದ ಆರ್ಥಿಕವಾಗಿ ಲಾಭದಾಯಕ ಇಳುವರಿ ನೀಡುವ ಅವಧಿಯಲ್ಲಿ ಇನ್ನು ಉಳಿದಿರುವ ಉಳಿಕೆ ವರ್ಷಗಳು ಎಷ್ಟು ಎಂಬುದು ಮೌಲ್ಯಮಾಪನ ಪ್ರಕ್ರಿಯೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ, ಈ ಅಂಶದ ಮೇಲೆಯೇ ಆ ಗಿಡವು ಒಂದು ವೇಳೆ ರೈತ/ಮಾಲೀಕನ ಒಡೆತನದಲ್ಲಿ ಮುಂದುವರೆದಿದ್ದ ಪಕ್ಷದಲ್ಲಿ ಎಷ್ಟು ಮೊತ್ತದ ಆದಾಯ ಬರುತ್ತಿತ್ತು ಎಂಬುದನ್ನು ತಿಳಿಯುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ.

ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳು = { ಆರ್ಥಿಕವಾಗಿ ಫಸಲು ಬಿಡುವ ಸರಾಸರಿ ಅವಧಿ + ಫಸಲಿನ ಪೂರ್ವಾವಧಿ } – ಮೌಲ್ಯಮಾಪನ ಮಾಡುವಾಗಿನ ಮರದ ವಯಸ್ಸು

No. of remaining years in the economic bearing period = { Average length of economic bearing period + Length of prebearing period } - Age of the tree at the time of valuation

ಇದನ್ನು ಸುಲಭವಾಗಿ ಕಂಡು ಹಿಡಿಯಲು ಅನುವಾಗುವಂತೆ ಮುಖ್ಯವಾದ ವಿವಿಧ ಜಾತಿಯ ತೋಟಗಾರಿಕೆ ಮರಗಳ ಫಸಲಿನ ಪೂರ್ವಾವಧಿ ಮತ್ತು ಆರ್ಥಿಕವಾಗಿ ಫಲ ಬಿಡುವ ಸರಾಸರಿ ಅವಧಿಯ ವಿವರಗಳನ್ನು ಅನುಬಂಧ–Iರಲ್ಲಿ ಕಾಣಿಸಲಾಗಿದೆ.

b) **ಫಸಲು ನೀಡುವ ಅವಧಿಯಲ್ಲಿ ಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ (Average annual cost of cultivation to be incurred on one tree during the economic bearing period:-**

ತೋಟಗಾರಿಕೆ ನಿರ್ವಹಣೆಯು ಉತ್ಪಾದನೆ ಹಾಗೂ ಉತ್ಪಾದಕತೆಯ ಮೇಲೆ ವಿಶಿಷ್ಟ ಪ್ರಭಾವವನ್ನು ಹೊಂದಿದೆ. ತೋಟಗಳಲ್ಲಿ ವಾಣಿಜ್ಯ ತಳಿಗಳು ಇದ್ದರೂ ಸಹ ಉತ್ತಮವಾಗಿ ನಿರ್ವಹಣೆ ಮಾಡದಿದ್ದಲ್ಲಿ ಉತ್ತಮ ಫಸಲು ನೀಡದೆ ವಿಫಲವಾಗುತ್ತದೆ. ಉತ್ತಮವಾಗಿ ಫಸಲು ನೀಡುವ ತೋಟ ಎಂದು ಪರಿಗಣಿಸಲು ಅದರಲ್ಲಿನ ಮರಗಳು ಸತ್ವದಿಂದ ಕೂಡಿರಬೇಕು, ಆರೋಗ್ಯವಾಗಿರಬೇಕು, ರೋಗ/ಕೀಟ ರಹಿತವಾಗಿರಬೇಕು. ಅಲ್ಲದೆ ಶಿಫಾರಸ್ಸಿಗನುಗುಣವಾಗಿ ಗಿಡಗಳ ಮಧ್ಯೆ ಅಂತರ ಇರಬೇಕು. ಇಲ್ಲದಿದ್ದಲ್ಲಿ ಕೊಂಬೆಗಳು ಒಂದಕ್ಕೊಂದು ಜೊತೆಯಾಗಿ ಸೂರ್ಯನ ಕಿರಣಗಳು ಎಲೆಯ ಮೇಲೆ ನೇರವಾಗಿ ಬೀಳುವುದನ್ನು ತಡೆಯುವುದರಿಂದ ಮರದ ಬೆಳವಣಿಗೆ ಕುಂಠಿತಗೊಳ್ಳುವುದಲ್ಲದೆ, ಇಳುವರಿ ಸಹ ಕಡಿಮೆಯಾಗುತ್ತದೆ.

ಆದ್ದರಿಂದ ಮೇಲ್ಕಂಡ ಅಂಶಗಳನ್ವಯ ತೋಟಗಾರಿಕೆ ಮರಗಳನ್ನು (Horticultural trees) ಈ ಕೆಳಕಂಡಂತೆ 4 ವರ್ಗಗಳನ್ನಾಗಿ ವರ್ಗೀಕರಿಸಲಾಗಿದೆ.

<u>ವರ್ಗ 1:–</u> ಈ ವರ್ಗದಡಿ ಬರುವ ಮರಗಳು

- ಕೃಷಿ ವಲಯಕ್ಕೆ ಅನುಗುಣವಾಗಿ ಬೆಳೆಯಲು ಶಿಫಾರಸ್ಸು ಮಾಡಿದ ಅತ್ಯುತ್ತಮ ಜಾತಿ/ತಳಿಯದ್ದಾಗಿರಬೇಕು.
- ಫಲವತ್ತಾದ ಮಣ್ಣಿನಲ್ಲಿ ಬೆಳೆದಿರಬೇಕು.
- ಶಿಫಾರಸ್ಸಿಗನುಗುಣವಾಗಿ ಗಿಡಗಳ ಮಧ್ಯೆ ಅಂತರವಿರಬೇಕು.
- ಎಲ್ಲಾ ಅಗತ್ಯವಾದ ಬೇಸಾಯ ಮತ್ತು ನಿರ್ವಹಣೆ ಕಾರ್ಯಗಳನ್ನು ಕೈಗೊಂಡಿರಬೇಕು.
- ಮರಗಳು ಕೀಟ/ರೋಗ ರಹಿತವಾಗಿರಬೇಕು
- ಈ ವರ್ಗಕ್ಕೆ ಸೇರುವ ಮರಗಳು ಆರೋಗ್ಯವಾಗಿದ್ದು, ಸತ್ವದಿಂದ ಕೂಡಿರಬೇಕು.
- ಮರಗಳು ಹೆಚ್ಚು ಇಳುವರಿ ನೀಡುವಂತಹವಾಗಿದ್ದು, ಒಳ್ಳೆಯ ವಿಸ್ತಾರದಿಂದ ಕೂಡಿರಬೇಕು.
  (Very good canopy).

<u>ವರ್ಗ 2:–</u> ಈ ವರ್ಗದಡಿ ಬರುವ ಮರಗಳು

- ಕೃಷಿ ವಲಯಕ್ಕೆ ಅನುಗುಣವಾಗಿ ಬೆಳೆಯಲು ಶಿಫಾರಸ್ಸು ಮಾಡಿದ ತಳಿ ಅಥವಾ ಒಳ್ಳೆಯ ಸ್ಥಳೀಯ ತಳಿಯಾಗಿರಬಹುದು.
- ಸಾಧಾರಣ ಗುಣಮಟ್ಟದ ಮಣ್ಣಿನಲ್ಲಿ ಬೆಳೆದಿರಬಹುದು.
- ಶಿಫಾರಸ್ಸು ಮಾಡಿರುವುದಕ್ಕಿಂತ ಸ್ವಲ್ಪಕಡಿಮೆ ಅಂತರದಲ್ಲಿ ಬೆಳೆಸಿದಂತಹ ಗಿಡಗಳಾಗಿರಬಹುದು.
- ಸಾಗುವಳಿ ಮತ್ತು ನಿರ್ವಹಣೆಯನ್ನು ಮಾಡಿರುವಂತಹ ಮರಗಳು.
- ಮರಗಳು ರೋಗ/ಕೀಟ ರಹಿತವಾಗಿರಬೇಕು.
- ಈ ವರ್ಗದ ಮರಗಳು ಸಾಧಾರಣ ಆರೋಗ್ಯ ಹೊಂದಿ, ಸಾಧಾರಣ ಇಳುವರಿ ನೀಡುವಂತಹ ಮರಗಳು.

<u>ವರ್ಗ 3:–</u> ಈ ವರ್ಗಕ್ಕೆ ಸೇರುವ ಮರಗಳು

- ಕೃಷಿ ವಲಯಕ್ಕೆ ಅನುಗುಣವಾಗಿ ಬೆಳೆಯಲು ಶಿಫಾರಸ್ಸು ಮಾಡಿರಬಹುದು/ ಮಾಡಿಲ್ಲದಿರಬಹುದು.
- ಕಡಿಮೆ ಫಲವತ್ತತೆಯ ಮಣ್ಣಿನಲ್ಲಿ ಬೆಳೆದಿರಬಹುದು.
- ಶಿಫಾರಸ್ಸು ಮಾಡಿದ ಅಂತರದ ಅರ್ಧಕ್ಕಿಂತ ಕಡಿಮೆ ಅಂತರದಲ್ಲಿ ಬೆಳೆದಿರುವ ಮರಗಳು.
- ಸಾಧಾರಣ ಮಟ್ಟದಲ್ಲಿ ಬೇಸಾಯ ಕ್ರಮಗಳನ್ನು ತೆಗೆದುಕೊಂಡಿರುವುದು.
- ರೋಗ/ಕೀಟ/ರೋಗ ಚಿಹ್ನೆ ಕಾಣಿಸುವ ಮರಗಳು ಈ ವರ್ಗಕ್ಕೆ ಸೇರಿರುತ್ತವೆ.
- ಮರಗಳು ಸಾರವಿಲ್ಲದ, ಸತ್ವವಿಲ್ಲದ ಬೆಳವಣಿಗೆಯಿಂದ ಕೂಡಿದ್ದು, ರೆಂಬೆಗಳು ಸರಿಯಾಗಿ ಹರಡಿಕೊಂಡಿರುವುದಿಲ್ಲ. ಅಲ್ಲದೇ ಎಲೆಗಳು ರೋಗ/ಕೀಟಗಳ ಹಾವಳಿಯಿಂದ ಆವೃತ್ತವಾಗಿದ್ದು, ಉತ್ಪಾದಕತೆ ತುಂಬಾ ಕಡಿಮೆ ಇರುತ್ತದೆ.

<u>ವರ್ಗ 4:–</u> ಈ ವರ್ಗಕ್ಕೆ ಸೇರುವ ಮರಗಳು

- ಸ್ಥಳೀಯ ಕೃಷಿ ವಲಯಕ್ಕೆ ಶಿಫಾರಸ್ಸು ಮಾಡಿದ, ಕೃಷಿ ವಲಯಕ್ಕೆ ಹೊಂದುವ/ಹೊಂದದೇ ಇರುವ ತಳಿಯಾಗಿದ್ದು, ಸ್ಥಳೀಯ ತಳಿ ಅಥವಾ ಸ್ಥಳೀಯ ವಾತಾವರಣಕ್ಕೆ ಹೊಂದಿಕೊಳ್ಳದ ತಳಿಯಾಗಿರಬಹುದು.

- ಮರಗಳ ನಿರ್ವಹಣೆ/ಸಾಗುವಳಿ ಕಾರ್ಯವನ್ನು ಸಂಪೂರ್ಣವಾಗಿ ಕಡೆಗಣಿಸಿದ್ದು, ರೋಗ/ ಕೀಟಗಳ ಭಾದೆಯಿಂದ ಕೂಡಿರುತ್ತವೆ.
- ಸತ್ವವಿಲ್ಲದ ಮಣ್ಣಿನಲ್ಲಿ ಬೆಳೆದಂತಹ ಮರಗಳಾಗಿರುತ್ತದೆ.
- ಮರಗಳು ಅನಾರೋಗ್ಯದಿಂದ ಕೂಡಿದ್ದು, ಸಾರವಿಲ್ಲದ ಬೆಳವಣಿಗೆ ಹೊಂದಿರುತ್ತವೆ.
- ಕಳಪೆ ಫಲವತ್ತೆಯ ಮಣ್ಣಿನಲ್ಲಿ ಬೆಳೆದಂತಹ ಮರಗಳಾಗಿರುತ್ತವೆ.
- ಸಂಪೂರ್ಣವಾಗಿ ಅಲಕ್ಷ್ಯ ಮಾಡಲಾಗಿರುವ ಮರಗಳಾಗಿರುತ್ತವೆ.

ಈ ಹಿನ್ನೆಲೆಯಲ್ಲಿ, ಮೌಲ್ಯಮಾಪನ ಅಧಿಕಾರಿಯು ಮರಗಳನ್ನು ಮೌಲ್ಯಮಾಪನ ಮಾಡುವಾಗ, ಮೇಲ್ಕಂಡ ವರ್ಗಗಳನ್ವಯ ತಿಳಿಸಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹೆಚ್ಚಿನ ಬುದ್ದಿಶಕ್ತಿ ಉಪಯೋಗಿಸಿಕೊಂಡು ಖಚಿತವಾದ ವರ್ಗಕ್ಕೆ ಸೇರಿಸಬೇಕಾಗಿರುತ್ತದೆ. ಅದರಂತೆ, ಮೌಲ್ಯಮಾಪನ ಮಾಡುವ ಮರವನ್ನು ಒಂದು ವರ್ಗಕ್ಕೆ ವರ್ಗೀಕರಿಸಿದ ಮೇಲೆ ಅನುಬಂಧದಲ್ಲಿ ತೋರಿಸಿರುವಂತೆ ಆ ಮರಕ್ಕೆ ತಗಲುವ ಸರಾಸರಿ ವಾರ್ಷಿಕ ವೆಚ್ಚ ನಿಗಧಿಪಡಿಸಬೇಕು.

**ಸೂಚನೆ:** ಮೇಲ್ಕಂಡ ವರ್ಗಗಳಲ್ಲಿ ನೀಡಲಾಗಿರುವ **ಶಿಫಾರಸ್ಸು** ಎಂಬ ಪದದ ಅರ್ಥ – ಆಯಾ ವರ್ಷಕ್ಕೆ ಸಂಬಂಧಿಸಿದಂತೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ವತಿಯಿಂದ ನೀಡಲಾದ ಸಮಗ್ರ ತೋಟಗಾರಿಕೆ ಕೈಪಿಡಿ ಪುಸ್ತಕ, Indian Council of Agricultural Research (ICAR) ನಿಂದ ನೀಡಲಾದ Hand book of Horticulture ಪುಸ್ತಕಗಳಲ್ಲಿ ಶಿಫಾರಸ್ಸು ಮಾಡಲಾದ ಬೆಳೆಗಳು, ತಳಿ, ಬೆಳೆಗಳ ಅಂತರ ಇತ್ಯಾದಿಗಳನ್ನು ಪರಿಗಣಿಸುವುದು. ಯಾವ ಬೆಳೆಗಳಿಗೆ UHS, ಬಾಗಲಕೋಟೆ ಮತ್ತು ICARನ ಶಿಫಾರಸ್ಸುಗಳು ಲಭ್ಯವಿರುವುದಿಲ್ಲವೋ ಅಂತಹ ಬೆಳೆಗಳಿಗೆ ICAR, IIHR, UAS, UHS ನಿಂದ ಹೊರಡಿಸಲಾದ ಪಠ್ಯ ಪುಸ್ತಕಗಳು/ Spices Board India /Indian Institute of Spices Research (IISR)ನ ಅಥವಾ ಆಯಾ ಬೆಳೆಗೆ ಸಂಬಂಧಿಸಿದ ರಾಜ್ಯ / ಕೇಂದ್ರ ಸರ್ಕಾರದ ಅಧೀನ ಕಾರ್ಯನಿರ್ವಹಿಸುತ್ತಿರುವ ನಿಗಮ / ಮಂಡಳಿ / ಸಂಸ್ಥೆಗಳ publications ಗಳಲ್ಲಿ ನೀಡಲಾದ ಶಿಫಾರಸ್ಸಿನಂತೆ ಪರಿಗಣಿಸಲು ಸೂಚಿಸಲಾಗಿದೆ.

**C) ಒಂದು ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ (Average annual income likely to be obtained from one tree):-**

ಯಾವುದೇ ಒಂದು ಬೆಳೆಯನ್ನು ಮೌಲ್ಯಮಾಪನ ಮಾಡುವಾಗ ಮೇಲ್ಕಾಣಿಸಿದ ಯಾವುದೇ ಒಂದು ವರ್ಗಕ್ಕೆ ವರ್ಗೀಕರಿಸಿದ ಮೇಲೆ, ಅನುಬಂಧ–Iರಲ್ಲಿ ತೋರಿಸಿರುವಂತೆ, ಆ ವರ್ಗಕ್ಕೆ ನೀಡಿರುವ ವಾರ್ಷಿಕ ಸರಾಸರಿ ವೆಚ್ಚವನ್ನು ನಿರ್ಧರಿಸಿದಂತೆ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ನಿಗಧಿಪಡಿಸುವುದು. ಮೌಲ್ಯಮಾಪನ ಅಧಿಕಾರಿಯು ಮೇಲ್ಕಂಡ ವರ್ಗಗಳಲ್ಲಿ ಯಾವುದಾದರೂ ಒಂದು ವರ್ಗಕ್ಕೆ ಮರವನ್ನು ವರ್ಗೀಕರಿಸಿ ಅನುಬಂಧದಲ್ಲಿ ತೋರಿಸಿರುವಂತೆ ಆ ಮರಕ್ಕೆ ಮಾಡುವ ಸರಾಸರಿ ವಾರ್ಷಿಕ ವೆಚ್ಚ ನಿರ್ಧರಿಸಿದಂತೆ ಆ ಮರದಿಂದ ಸಿಗುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ಅದೇ ವರ್ಗದಲ್ಲಿ ಉಲ್ಲೇಖಿಸಬೇಕು. ಯಾವುದೇ ಕಾರಣಕ್ಕೂ ಸರಾಸರಿ ವಾರ್ಷಿಕ ವೆಚ್ಚವನ್ನು ಒಂದು ವರ್ಗಕ್ಕೆ ಉಲ್ಲೇಖಿಸಿ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಇನ್ನೊಂದು ವರ್ಗಕ್ಕೆ ಉಲ್ಲೇಖಿಸಬಾರದು.

**ಉದಾ:** ಒಂದು ಮರವನ್ನು ವರ್ಗ 2ಕ್ಕೆ ವರ್ಗೀಕರಿಸಿದ ಮೇಲೆ ಆ ಮರಕ್ಕೆ ಮಾಡುವ ಸರಾಸರಿ ವಾರ್ಷಿಕ ವೆಚ್ಚವನ್ನು ಅನುಬಂಧದಲ್ಲಿನ ವರ್ಗ 2ನ್ನು ಉಲ್ಲೇಖಿಸಬೇಕು. ಅದರಂತೆ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ವರ್ಗ–2ರಲ್ಲೇ ಉಲ್ಲೇಖಿಸಬೇಕು.

**d) ಡಿಸ್ಕೌಂಟ್ ಫ್ಯಾಕ್ಟರ್ (Discount factor):–**

ಈ ಮೌಲ್ಯಮಾಪನ ಕಾರ್ಯದ ವಿಶೇಷತೆಯೆಂದರೆ, ಡಿಸ್ಕೌಂಟ್ ಫ್ಯಾಕ್ಟರ್ ಬಳಕೆ, ಭೂ ಸ್ವಾಧೀನದ ಸಮಯದಲ್ಲಿ ಪರಿಹಾರ ಮೊತ್ತವನ್ನು ನಿರ್ಧರಿಸುವುದೆಂದರೆ, ಸದರಿ ಮರವನ್ನು ಕಡಿಯದೇ ಉಳಿಸಿಕೊಂಡಲ್ಲಿ ಉಳಿಕೆ ಲಾಭದಾಯಕವಾಗಿ ಫಲ ಬಿಡುವ ಅವಧಿಯಲ್ಲಿ ಆ ಮರದಿಂದ ಬರಬಹುದಾದ ಆದಾಯವನ್ನು ನಿರ್ಧರಿಸುವುದಾಗಿರುತ್ತದೆ. ಮುಂದೆ ಅಥವಾ ಭವಿಷ್ಯತ್ತಿನಲ್ಲಿ ಬರಬಹುದಾದ ಆದಾಯವನ್ನು ಈಗಲೇ ಪಾವತಿಸುವುದಾದಲ್ಲಿ ಭವಿಷ್ಯದ ಮೊತ್ತವನ್ನು ಈಗಿನ ಮೌಲ್ಯಕ್ಕೆ ಪರಿವರ್ತಿಸಬೇಕಾಗುತ್ತದೆ. ಇದನ್ನು ಡಿಸ್ಕೌಂಟ್ ಫ್ಯಾಕ್ಟರ್ (ಶೇ.8) ಉಪಯೋಗಿಸಿ ನಿರ್ಧರಿಸಬಹುದಾಗಿರುತ್ತದೆ. ಇದನ್ನು ಸುಲಭವನ್ನಾಗಿಸಲು ಸ್ಟಾಂಡರ್ಡ್ ಡಿಸ್ಕೌಂಟ್ ಫ್ಯಾಕ್ಟರ್ ಅನ್ನು ವಿವಿಧ ಉಳಿಕೆ ವರ್ಷಗಳ ಗುಂಪುಗಳಿಗೆ ಈ ಕೆಳಗೆ ಕಾಣಿಸಿದ ಪಟ್ಟಿಯಲ್ಲಿ ನೀಡಲಾಗಿದೆ.

| ಆರ್ಥಿಕವಾಗಿ ಫಲ ಬಿಡುವ ಅವಧಿಯಲ್ಲಿ ಉಳಿದ ವರ್ಷಗಳು | ಡಿಸ್ಕೌಂಟ್ ಫ್ಯಾಕ್ಟರ್ |
|---|---|
| 1–5 | 1.05 |
| 6–10 | 1.40 |
| 11–15 | 1.75 |
| 16–20 | 2.10 |
| 21–25 | 2.45 |
| 26–30 | 2.80 |

| | |
|---|---|
| 31–35 | 3.15 |
| 36–40 | 3.50 |
| 41–45 | 3.85 |
| 46–50 | 4.20 |
| 51–55 | 4.55 |
| 56–60 | 4.90 |
| 61–65 | 5.25 |
| 66–70 | 5.60 |
| 71–75 | 5.95 |
| 76–80 | 6.30 |
| 81–85 | 6.65 |
| 86–90 | 7.00 |

**ಭವಿಷ್ಯತ್ತಿನ ಕಾಲ್ಪನಿಕ ಬೆಲೆಯನ್ನು ಪ್ರಸ್ತುತ ಬೆಲೆಯನ್ನಾಗಿ ಪರಿವರ್ತಿಸುವಾಗ ಈ ಕೆಳಕಂಡ ಸೂತ್ರದ ಅನುಸಾರ ಕಂಡು ಹಿಡಿಯಬೇಕು.**

ಆರ್ಥಿಕವಾಗಿ ಲಾಭದಾಯಕವಾಗಿ ಫಸಲು ನೀಡುವ ಉಳಿದ ಅವಧಿಯಲ್ಲಿ ಸಿಗಬಹುದಾದ ಮೊತ್ತದ ಪ್ರಸ್ತುತ ಮೌಲ್ಯ (ಪ್ರಸ್ತುತ ಬೆಲೆ) = ಆರ್ಥಿಕವಾಗಿ ಲಾಭದಾಯಕ ವಾರತಕ್ಕಂತಹ ಉಳಿದ ಅವಧಿಯ x { ಸರಾಸರಿ ವಾರ್ಷಿಕ ಆದಾಯ – ಸರಾಸರಿ ವಾರ್ಷಿಕ ವೆಚ್ಚ } / ಡಿಸ್ಕೌಂಟ್ ಫ್ಯಾಕ್ಟರ್

Present value of the amount projected for the remaining number of years in the economic bearing period(PV) = Remaining number of years in the economic bearing period x { Average annual income – Average annual Expenditure } / Discount factor

**ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ (Actual compensation for the remaining number of years in the economic bearing period):-**

ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಪ್ರಕೃತಿ ವಿಕೋಪದಿಂದ ಬೆಳೆಹಾನಿ ಸಂಭವಿಸಬಹುದಾಗಿದ್ದು, ಈ ಅಂಶವನ್ನು ಸಹ ತರ್ಕಬದ್ಧವಾಗಿ ನಿರೀಕ್ಷಿಸಬೇಕಾಗಿರುತ್ತದೆ. ಆದುದರಿಂದ ಪ್ರಕೃತಿ ವಿಕೋಪದಿಂದ ಸರಾಸರಿ ಪ್ರತಿ ವರ್ಷ ಶೇ.20ರ ಭಾಗ ಬೆಳೆಹಾನಿ ಸಂಭವಿಸಬಹುದಾಗಿದೆ ಎಂದು ಪರಿಗಣಿಸಲಾಗಿರುತ್ತದೆ. ಆದ್ದರಿಂದ ಒಟ್ಟಾರೆ ಪ್ರಸ್ತುತ ಮೊತ್ತದಲ್ಲಿ ಶೇ.20ರ ಭಾಗವನ್ನು ಕಳೆಯಬೇಕಾಗಿರುತ್ತದೆ. ಅದರಂತೆ, ಈ ಕೆಳಕಂಡ ಸೂತ್ರದಿಂದ ಬೆಳೆಗಾರನಿಗೆ ನೀಡಬಹುದಾದ ನಿಖರವಾದ ಪರಹಾರವನ್ನು ಕಂಡು ಹಿಡಿಯಬಹುದು.

ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ = ಪ್ರಸ್ತುತ ಬೆಲೆ - { ಪ್ರಸ್ತುತ ಬೆಲೆ / 5 }

Actual amount of compensation for the remaining number of years in the economic bearing period = PV - $\left\{ \frac{PV}{5} \right\}$

**ಟಿಪ್ಪಣಿ:–** ಮೌಲ್ಯಮಾಪನ ಮಾಡುವ ಮರವು ಮಾರುಕಟ್ಟೆ ಸ್ಥಳದಿಂದ ಹತ್ತಿರದಲ್ಲಿದ್ದರೆ (ಅಂದರೆ 10ಕಿ.ಮೀ ಆಸುಪಾಸಿನಲ್ಲಿ) ನಿಗದಿಪಡಿಸಿದ ಪರಿಹಾರದ ಒಟ್ಟು ಮೊತ್ತಕ್ಕೆ ಗರಿಷ್ಠ ಶೇ.5 (Maximum of 5%) ರಷ್ಟು ಹೆಚ್ಚಿನ ಮೊತ್ತವನ್ನು ನೀಡಬಹುದು. ಇದು ಸಂಪೂರ್ಣವಾಗಿ ಮೌಲ್ಯಮಾಪನ ಮಾಡುವ ಅಧಿಕಾರಿಯ ವಿವೇಚನೆಗೊಳಪಟ್ಟಿರುತ್ತದೆ. ಆದಾಗ್ಯೂ ಮೌಲ್ಯ ಮಾಪನ

ಅಧಿಕಾರಿಯು ಈ ರೀತಿ ನಿಗಧಿಪಡಿಸುವ ಹೆಚ್ಚಿನ ಲಾಭಾಂಶ ಮೊತ್ತವು ವರ್ಗ 3 ಮತ್ತು ವರ್ಗ 4ರಡಿ ಬರುವ ಮರಗಳಿಗೆ ಅನ್ವಯಿಸಬಾರದು.

**ಫಸಲು ಬಿಡುವ ಹಂತದಲ್ಲಿನ ಮರದ ಅಂತಿಮ ಪರಿಹಾರದ ಮೊತ್ತ (Final Compensation for a tree in bearing stage):-**

ಫಸಲು ಬಿಡುವ ಹಂತದಲ್ಲಿನ ಮರಕ್ಕೆ ಅಂತಿಮವಾಗಿ ನೀಡುವ ಮೊತ್ತವನ್ನು ಈ ಕೆಳಕಂಡ ಸೂತ್ರದಿಂದ ಕಂಡು ಹಿಡಿಯಬೇಕು.

| | | | | |
|---|---|---|---|---|
| ಫಸಲು ಬಿಡುವ ಮರದ ಅಂತಿಮ ಪರಿಹಾರದ ಮೊತ್ತ | = | ಮರದ ಮೂಲ ಬೆಲೆ | + | ಆರ್ಥಿಕವಾಗಿ ಲಾಭದಾಯಕ ಫಸಲು ಬಿಡುವ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ |
| Value of final Compensation for a bearing tree | = | Basic value of tree | + | Actual amount of compensation for the remaining number of years in the bearing period |

**ಸೂಚನೆ:**

1) ಈ ಮಾರ್ಗಸೂಚಿಯು ಸರ್ಕಾರದ ಆದೇಶದ ದಿನಾಂಕದಿಂದ ಮುಂದಿನ ಆದೇಶ ನೀಡುವವರೆಗೂ ಚಾಲ್ತಿಯಲ್ಲಿರುತ್ತದೆ.

2) ಆರ್ಥಿಕವಾಗಿ ಲಾಭದಾಯಕ ಫಸಲು ಬಿಡುವ ಅವಧಿ ಮೀರಿದಂತಹ ಮರಗಳನ್ನು ಮರಮುಟ್ಟು/ಉರುವಲಿಗಾಗಿ ಮಾತ್ರ ಮೌಲ್ಯಮಾಪನ ಮಾಡಬೇಕಾಗಿದ್ದು, ಇದು ಅರಣ್ಯ ಇಲಾಖೆಗೆ ಸಂಬಂಧಿಸಿರುತ್ತದೆ.

3) ಮೌಲ್ಯಮಾಪನ ಮಾಡುವ ಮರದ ಪ್ರಸ್ತುತ ಬೆಲೆಯು ಇತರೆ ರಚನೆಗಳಾದ ಭೂಮಿ, ಬೇಲಿ, ಪೆಂಡಾಲ್, ಬಾವಿ, ಫಾರಂ ಹೌಸ್ ಇತ್ಯಾದಿಗಳಿಂದ ಸಂಪೂರ್ಣವಾಗಿ ಹೊರತಾಗಿರುತ್ತದೆ. ಈ ರಚನೆಗಳ ಮೌಲ್ಯಮಾಪನವನ್ನು ಕಂದಾಯ ಇಲಾಖೆ/ಲೋಕೋಪಯೋಗಿ ಇಲಾಖೆಯವರು ಪ್ರತ್ಯೇಕವಾಗಿ ಮಾಡುತ್ತಾರೆ.

4) ಸಾಲುಮರಗಳನ್ನು ಕೇವಲ ಅಲಂಕಾರಕ್ಕಾಗಿ ಉಪಯೋಗಿಸುವುದಾಗಿದ್ದು, ಇವುಗಳಿಗೆ ವಾಣಿಜ್ಯವಾಗಿ ಬೆಲೆ ಇಲ್ಲದ್ದರಿಂದ, ಇವುಗಳನ್ನು ಮರಮುಟ್ಟು/ಉರುವಲಿಗಾಗಿ ಮಾತ್ರ ಮೌಲ್ಯಮಾಪನ ಮಾಡಬೇಕು. ಇದು ಅರಣ್ಯ ಇಲಾಖೆಗೆ ಸಂಬಂದಿಸಿರುತ್ತದೆ.

5) ರಾಜ್ಯಪತ್ರ/ಇತರೆ ಮಾಧ್ಯಮಗಳ ಮುಖಾಂತರ ಭೂ ಸ್ವಾಧೀನ ಪ್ರಕ್ರಿಯೆಯ ನೋಟೀಸ್ ನೀಡಿದ ನಂತರ ನೆಡುವ / ಅಭಿವೃದ್ಧಿಪಡಿಸುವ ತೋಟಗಾರಿಕೆ ಬೆಳೆಗಳ ತೋಟಗಳನ್ನು ಯಾವುದೇ ಕಾರಣಕ್ಕೂ ಮೌಲ್ಯಮಾಪನ ಮಾಡಬಾರದು. ಮೌಲ್ಯ ಮಾಪನ ಸಂದರ್ಭದಲ್ಲಿ ಒಂದು ಯುನಿಟ್ ಪ್ರದೇಶದಲ್ಲಿ ಇರುವ ಗಿಡಗಳ ವಯಸ್ಸು ಅಥವಾ ಗಿಡಗಳ ಗಾತ್ರ ಏಕರೂಪತೆ ಹೊಂದಿರಬೇಕು / ಒಂದೇ ಸಮನಾಗಿರಬೇಕು (Uniformity in plant size uniform land). ಭೂ ಸ್ವಾಧೀನ ಪ್ರಕ್ರಿಯೆ ನೋಟಿಫೀಕೆಷನ್ ಆದ ನಂತರ / ಇತ್ತೀಚೆಗೆ ನೆಟ್ಟ ಗಿಡಗಳನ್ನು ಮೌಲ್ಯ ಮಾಪನ ಮಾಡುವ ಅಧಿಕಾರಿ ಪರಿಗಣನೆಗೆ ತೆಗೆದುಕೊಳ್ಳಬಾರದು.

6) ತೋಟಗಾರಿಕೆ ಬೆಳೆಗಳನ್ನು ಮೌಲ್ಯಮಾಪನ ಮಾಡುವಾಗ ಸಂಬಂಧಿಸಿದ ಭೂ ಸ್ವಾಧೀನಾಧಿಕಾರಿಗಳು ಸ್ಥಳೀಯ ತೋಟಗಾರಿಕೆ ಅಧಿಕಾರಿಗಳ ಜೊತೆಗೂಡಿ ಸರ್ವೆ ನಂಬರ್, ಮೌಲ್ಯಮಾಪನ ಮಾಡಬೇಕಾದ ಮರಗಳ ವಿವರ ಇತ್ಯಾದಿಗಳನ್ನು ಖಚಿತಪಡಿಸಿರಬೇಕು.

7) ಸಂಬಂಧಿಸಿದ ತಾಲ್ಲೂಕು ತೋಟಗಾರಿಕೆ ಅಧಿಕಾರಿಯು, ಮೌಲ್ಯಮಾಪನ ಕಾರ್ಯ ಮುಗಿಸಿದ ನಂತರ, ವರದಿಯನ್ನು ಮೇಲುಸಹಿಗಾಗಿ ಸಂಬಂದಪಟ್ಟ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ರವರಿಗೆ ತಲುಪಿಸಬೇಕು. ತದನಂತರ ತೋಟಗಾರಿಕೆ ಉಪನಿರ್ದೇಶಕರು (ಜಿಲ್ಲಾ ಪಂಚಾಯತ್)ರವರು ವರದಿಯನ್ನು ಪರಿಶೀಲಿಸಿ ಮೇಲುಸಹಿ ಮಾಡಿ ಸಂಬಂದಪಟ್ಟ ಭೂ ಸ್ವಾಧೀನಾಧಿಕಾರಿಗಳಿಗೆ ಕಳುಹಿಸಿಕೊಡಬೇಕು. ಮೌಲ್ಯಮಾಪನದ ಬಗ್ಗೆ ಯಾವುದೇ ತಕರಾರು ಎದುರಾದಲ್ಲಿ ಸಂಬಂಧಿಸಿದ ಶಾಖೆಯು ಮಧ್ಯಸ್ಥರಾಗಿರುತ್ತಾರೆ.

8) ಈ ಮಾರ್ಗಸೂಚಿಯು ಸಂಪೂರ್ಣವಾಗಿ ಆಡಳಿತಾತ್ಮಕವಾಗಿದ್ದು, ಸಂಬಂದಿಸಿದ ಭೂ ಸ್ವಾಧೀನಾಧಿಕಾರಿಯ ಕೋರಿಕೆಯಂತೆ ಅವರಿಗೆ ನೀಡಬಹುದಾದ ವಿವರಗಳಿರುತ್ತವೆ.

9) ಗಿಡಗಳ ಅಂತರ/ಪ್ರತಿ ಎಕರೆ ಪ್ರದೇಶದಲ್ಲಿ ಬೆಳೆಯಬಹುದಾದ ಗಿಡಗಳ ಸಂಖ್ಯೆಯನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ವತಿಯಿಂದ ನೀಡಲಾದ ಸಮಗ್ರ ತೋಟಗಾರಿಕೆ ಕೈಪಿಡಿ ಪುಸ್ತಕ, Indian Council of Agricultural Research (ICAR) ನಿಂದ ನೀಡಲಾದ Hand book of Horticulture ಪುಸ್ತಕದ ಮಾಹಿತಿಯನ್ನು ಪರಿಗಣಿಸುವುದು. ಯಾವ ಬೆಳೆಗಳಿಗೆ UHS, ಬಾಗಲಕೋಟೆ ಮತ್ತು ICAR ನ ಶಿಫಾರಸ್ಸುಗಳು ಲಭ್ಯವಿರುವುದಿಲ್ಲವೋ ಅಂತಹ ಬೆಳೆಗಳಿಗೆ ICAR, IIHR, UAS, UHS ನಿಂದ ಹೊರಡಿಸಲಾದ ಪತ್ಯ ಪುಸ್ತಕಗಳು/ Spices Board India / Indian Institute of Spices Research (IISR)ನ ಅಥವಾ ಆಯಾ ಬೆಳೆಗೆ ಸಂಬಂಧಿಸಿದ ರಾಜ್ಯ / ಕೇಂದ್ರ ಸರ್ಕಾರದ ಅಧೀನ ಕಾರ್ಯನಿರ್ವಹಿಸುತ್ತಿರುವ ನಿಗಮ / ಮಂಡಳಿ / ಸಂಸ್ಥೆಗಳ publications ಗಳಲ್ಲಿ ನೀಡಲಾದ ಶಿಫಾರಸ್ಸಿನಂತೆ ಪರಿಗಣಿಸುವುದು.

10) ಅಧಿಕ ಸಾಂಧ್ರತೆ ಬೇಸಾಯ ಪದ್ಧತಿಯಲ್ಲಿ (HDP) ಗಿಡಗಳ ಅಂತರ/ ಪ್ರತಿ ಎಕರೆ ಪ್ರದೇಶದಲ್ಲಿ ಬೆಳೆಯಬಹುದಾದ ಗಿಡಗಳ ಸಂಖ್ಯೆಯನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯಿಂದ ಮಾವು ಬೆಳೆಗೆ ಶಿಫಾರಸ್ಸು ಮಾಡಲಾದ 5X5 ಮೀ ಅಂತರ ಹಾಗೂ ಸೀಬೆಗೆ – 3X3 ಮೀ ಅಂತರವನ್ನು ಮಾತ್ರ ಅಧಿಕ ಸಾಂಧ್ರತೆ ಬೇಸಾಯ ಪದ್ಧತಿಯಲ್ಲಿ ಪರಿಗಣಿಸುವುದು.

11) ಅಧಿಕ ಸಾಂಧ್ರತೆ ಬೇಸಾಯ ಪದ್ಧತಿಯಲ್ಲಿ (HDP) ಗಿಡಗಳ ಜೀವಿತಾವಧಿ /ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿ (Economic Bearing Period) ಸಾಮಾನ್ಯವಾಗಿ ಕಡಿಮೆ ಇರುವುದನ್ನು ಗಮನದಲ್ಲಿಟ್ಟುಕೊಂಡು ಮಾವು ಬೆಳೆಯ ಆರ್ಥಿಕವಾಗಿ ಲಾಭದಾಯವಾಗಿರತಕ್ಕಂತಹ ಅವಧಿ (Economic Bearing Period) ಸಾಮಾನ್ಯವಾಗಿ 25 ವರ್ಷ ಹಾಗೂ ಸೀಬೆ 15 ವರ್ಷ ಎಂದು ಪರಿಗಣಿಸುವುದು.

**ಜ್ಯೋತಿ ಆರ್. ಜೆ.**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ.

**PR. 83**

**SC. 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ದಿನಾಂಕ: 07.06.2013.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ದಿನಾಂಕ: 14.06.2013.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇನೌವ 2014, ದಿನಾಂಕ: 06.02.2014.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇನೌವ 2015, ದಿನಾಂಕ: 27.04.2015.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರಿಂದ (4)ರವರೆಗಿನ ಸರ್ಕಾರಿ ಆದೇಶಗಳಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತ ಮಾರ್ಗಸೂಚಿಗಳನ್ನು ನೀಡಲಾಗಿದೆ. ರಾಜ್ಯ ಸಿವಿಲ್ ಸೇವೆಗಳ ಗುಂಪು 'ಎ' ಮತ್ತು 'ಬಿ' ಹುದ್ದೆಗಳಿಗೆ ದಿನಾಂಕ: 07.06.2013 ರ ಆದೇಶದಲ್ಲಿ 3 ವರ್ಷಗಳನ್ನು ವರ್ಗಾವಣೆಗಾಗಿ ಕನಿಷ್ಠ ಸೇವಾವಧಿಯೆಂದು ನಿಗದಿಪಡಿಸಲಾಗಿದೆ. ಸರ್ಕಾರವು ಈ ಅಂಶವನ್ನು ಮರುಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2015, ಬೆಂಗಳೂರು, ದಿನಾಂಕ: 14.10.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶದ ಕಂಡಿಕೆ 8ರಲ್ಲಿ ವರ್ಗಾವಣೆಗಾಗಿ ನಿಗದಿಪಡಿಸಲಾಗಿರುವ ಕನಿಷ್ಠ ಅವಧಿಯನ್ನು ಭಾಗಶ: ಮಾರ್ಪಡಿಸಿ ಗುಂಪು 'ಎ' ಮತ್ತು 'ಬಿ' ಹುದ್ದೆಗಳಿಗೆ ವರ್ಗಾವಣೆ ಮಾಡಲು 2 ವರ್ಷಗಳನ್ನು ಕನಿಷ್ಠ ಸೇವಾವಧಿ ಎಂದು ನಿಗದಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ. ಮಂಗಳ ಜಿ.ಎಸ್.**

PR. 86 ಸರ್ಕಾರದ ಅಧೀನ ಕಾರ್ಯದರ್ಶಿ

SC. 200 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಬಂಧು ಯೋಜನೆಯಡಿಯಲ್ಲಿ ಬರುವ ಆರೋಗ್ಯ ಸಂಸ್ಥೆಗಳಿಗೆ ವೈದ್ಯಾಧಿಕಾರಿಗಳು ಮತ್ತು ಇತರೆ ಸಿಬ್ಬಂದಿಯನ್ನು ಕೌನ್ಸಿಲಿಂಗ್ ಮೂಲಕ ಸ್ಥಳನಿಯುಕ್ತಿಗೊಳಿಸಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರ ಪ್ರಸ್ತಾವನೆ ಸಂಖ್ಯೆ: ಜೆಆರ್‌ಫ (1ಎ) 80/2015–16, ದಿನಾಂಕ: 02.01.2016.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 251 ಸಿಜಿಎಂ 2015, ದಿನಾಂಕ: 01.12.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಆರೋಗ್ಯ ಸೇವೆಗಳಲ್ಲಿ ಸಮುದಾಯ ಸಹಭಾಗೀತ್ವವನ್ನು ಪ್ರೋತ್ಸಾಹಿಸುವ ಹಾಗೂ ವೈದ್ಯಕೀಯ ಸಿಬ್ಬಂದಿ ಕೊರತೆಯನ್ನು ನೀಗಿಸುವ ಮೂಲಕ ಗ್ರಾಮೀಣ ಭಾಗದಲ್ಲಿ ಉತ್ತಮ ಆರೋಗ್ಯ ಸೇವೆಯನ್ನು ನೀಡುವ ಉದ್ದೇಶದಿಂದ ಜಾರಿಗೊಳಿಸಲಾದ ಆರೋಗ್ಯ ಬಂಧು ಯೋಜನೆಯಡಿಯಲ್ಲಿ ವೈದ್ಯಕೀಯ ಮಹಾವಿದ್ಯಾಲಯ/ಸರ್ಕಾರೇತರ ಸಂಸ್ಥೆಗಳಿಗೆ ನೀಡಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಸಮುದಾಯ ಆರೋಗ್ಯ ಕೇಂದ್ರಗಳು ಮತ್ತು ತಾಲ್ಲೂಕು ಆಸ್ಪತ್ರೆಗಳನ್ನು ಮೇಲೆ ಓದಲಾದ (2) ಆದೇಶದಲ್ಲಿ ಹಿಂಪಡೆದು ಆದೇಶಿಸಲಾಗಿರುವುದರಿಂದ ಹಾಗೂ ಸಾರ್ವಜನಿಕ ಆರೋಗ್ಯ ಸೇವೆ ನೀಡಲು ಇಲಾಖೆಯ ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳನ್ನು ನೇಮಕ ಮಾಡಲು ನಿಯಮಾನುಸಾರ ಕ್ರಮ ತೆಗೆದುಕೊಳ್ಳಲು ಆದೇಶವಾಗಿರುವುದಾಗಿರುವುದರಿಂದ ಸದರಿ ಆದೇಶದಂತೆ ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳನ್ನು 52 ಸಂಸ್ಥೆಗಳಿಗೆ ಸ್ಥಳನಿಯುಕ್ತಿಗೊಳಿಸಲು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ 2011 ಹಾಗೂ ಅದರಡಿಯಲ್ಲಿ ರಚಿತವಾದ ನಿಯಮಗಳ ಪ್ರಕಾರ ಹಾಲಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳನ್ನು ಕೌನ್ಸಿಲಿಂಗ್ ಮೂಲಕ ಸ್ಥಳನಿಯುಕ್ತಿಗೊಳಿಸಲು ಅನುಮತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಆರೋಗ್ಯ ಬಂಧು ಯೋಜನೆಯನ್ನು ರದ್ದುಪಡಿಸಿರುವುದರಿಂದ ಅದರ ಅಡಿಯಲ್ಲಿ ಬರುವ ಆರೋಗ್ಯ ಸಂಸ್ಥೆಗಳಿಗೆ ವರ್ಗಾವಣೆ ನಿಯಮಾನುಸಾರ ಹಾಲಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳನ್ನು ಕೌನ್ಸಿಲಿಂಗ್ ಮೂಲಕ ಸ್ಥಳನಿಯುಕ್ತಿಗೊಳಿಸಲು ಅನುಮತಿ ನೀಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 14 ಹೆಚ್‌ಎಸ್‌ಹೆಚ್ 2016, ಬೆಂಗಳೂರು, ದಿನಾಂಕ: 18.01.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಆರೋಗ್ಯ ಬಂಧು ಯೋಜನೆಯನ್ನು ರದ್ದುಪಡಿಸಿರುವುದರಿಂದ ಅದರ ಅಡಿಯಲ್ಲಿ ಬರುವ ಆರೋಗ್ಯ ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



2011 ಹಾಗೂ ಅದರಡಿಯಲ್ಲಿ ರಚಿತವಾದ ನಿಯಮಗಳ ಪ್ರಕಾರ ಹಾಲಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳನ್ನು ಕೌನ್ಸಿಲಿಂಗ್ ಮೂಲಕ ಸ್ಥಳನಿಯುಕ್ತಿಗೊಳಿಸಲು ಅನುಮತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

**PR. 89** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** "ತಜ್ಞರ ಸಮಿತಿ, ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿ" ಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಒಇ 160 ಸಿಐಡಿ 2014ರ ದಿನಾಂಕ: 30.07.2014.
2. ಸರ್ಕಾರದ ಸಮ ಸಂಖ್ಯೆಯ ಆದೇಶ ದಿನಾಂಕ: 02.06.2015.
3. ಸರ್ಕಾರದ ಸಮ ಸಂಖ್ಯೆಯ ಆದೇಶ ದಿನಾಂಕ: 15.07.2015
4. ಸರ್ಕಾರದ ಆದೇಶ ಸಂಖ್ಯೆ: ಒಇ 160 ಸಿಐಡಿ 2014 (ಭಾಗ–6) ದಿನಾಂಕ: 20.07.2015.
5. ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ ದೌರ್ಜನ್ಯ ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿ" ಯ ಅಧ್ಯಕ್ಷರ ಟಿಪ್ಪಣಿ ಸಂಖ್ಯೆ: ತಸ/ಅ/614/2015, ದಿನಾಂಕ: 16.12.2015.

**ಪ್ರಸ್ತಾವನೆ:**

ಸರ್ಕಾರದ ಆದೇಶದ ದಿನಾಂಕ: 30.07.2014ರಲ್ಲಿ ಅತ್ಯಾಚಾರ ಪ್ರಕರಣಗಳಿಗೆ ಸಂಬಂಧಿಸಿದ ಕಾನೂನಿಗೆ ತಿದ್ದುಪಡಿ ಹಾಗೂ ಶಿಕ್ಷೆ ಪ್ರಮಾಣ ಹೆಚ್ಚಿಸುವ ಬಗ್ಗೆ ಅಧ್ಯಯನ ನಡೆಸಿ ಕಾನೂನು ತಿದ್ದುಪಡಿಗೆ ಅಗತ್ಯ ಶಿಫಾರಸ್ಸು ಮಾಡಲು ತಜ್ಞರ ಸಮಿತಿಯನ್ನು ರಚಿಸಲಾಗಿದ್ದು, ಮೇಲೆ ಓದಲಾದ (3)ರ ಆದೇಶದನ್ವಯ ಸಮಿತಿಯ ಶೀರ್ಷಿಕೆಯನ್ನು ತಜ್ಞರ ಸಮಿತಿ, ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿ" ಎಂಬುದಾಗಿ ತಿದ್ದಿ ಆದೇಶಿಸಲಾಗಿದೆ.

ಸದರಿ ಸಮಿತಿಯು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಭೇಟಿ ಕೊಟ್ಟು ಆಯಾ ಜಿಲ್ಲೆಗಳ ಅಧಿಕಾರಿಗಳಿಂದ, ಸಂಘ ಸಂಸ್ಥೆಗಳಿಂದ, ಸಾರ್ವಜನಿಕರಿಂದ ಮತ್ತು ರಾಜ್ಯ ಮಟ್ಟದ ವಿವಿಧ ಸಂಘ ಸಂಸ್ಥೆಗಳು, ಸಂಘಟನೆಗಳು, ಶಿಕ್ಷಣ ಸಂಸ್ಥೆಗಳು, ತಜ್ಞರುಗಳಿಂದ ಅಹವಾಲು ಮತ್ತು ಸಲಹೆ ಸೂಚನೆಗಳನ್ನು ಪಡೆಯುವುದಲ್ಲದೆ ಅವುಗಳ ಸಾಧಕ ಬಾಧಕಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಿ ಸಕಾರಕ್ಕೆ ವರದಿಯನ್ನು ಸಲ್ಲಿಸಲು ಕಾಲಾವಕಾಶ ಬೇಕಾಗಿರುವುದರಿಂದ ಸಮಿತಿಯ ಅವಧಿಯನ್ನು ದಿನಾಂಕ: 30.06.2016 ರವರೆಗೆ ವಿಸ್ತರಿಸಲು ಸಮಿತಿಯ ಅಧ್ಯಕ್ಷರು ಮೇಲೆ ಓದಲಾದ (5)ರ ಮನವಿಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸಮಿತಿಯ ಅವಧಿಯನ್ನು ವಿಸ್ತರಿಸಲು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 160 ಸಿಐಡಿ 2014 (ಭಾಗ–6) ಬೆಂಗಳೂರು, ದಿನಾಂಕ: 28 ಜನವರಿ, 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ತಜ್ಞರ ಸಮಿತಿ, ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿ"ಯ ಕಾಲಾವಧಿಯನ್ನು ದಿನಾಂಕ: 01.01.2016 ರಿಂದ 30.06.2016 ರವರೆಗೆ ಆರು ತಿಂಗಳು ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಸುಗುಣ**

**PR. 97** ಸರ್ಕಾರದ ಅಧೀನ ಕಾರ್ಯದರ್ಶಿ

**SC.100** ಒಳಾಡಳಿತ ಇಲಾಖೆ (ಅಪರಾಧಗಳು)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59